# ಶಿವಾನುಭವ

ವರ್ಷ ೧೯ | ಅಕ್ಟೋಬರ ೧೯೪೪. | ಸಂಚಿಕೆ ೧

## ವೀರಶೈವ ಸಮಾಜೋನ್ನತಿಯ ಪ್ರಥಮೋಪಾಯ.

(ಶ್ರೀಗುರು ಸಂಗನಬಸವಸ್ವಾಮಿಗಳು ಮು. ಸುಕ್ಷೇತ್ರ ಬಂಥನಾಳ
ತಾ. ಇಂಡಿ, ಜಿ. ವಿಜಾಪುರ.)

ಸಾಂಪ್ರತಕಾಲದಲ್ಲಿ ಅತ್ಯಂತ ಹೀನದೀನ ಸ್ಥಿತಿಯಲ್ಲಿರುವ ನಮ್ಮ ವೀರಶೈವ ಸಮಾಜವು ಸರ್ವಾಂಗಸುಂದರವಾಗಿಯೂ ಒಳ್ಳೇ ಓಜಸ್ಸಿನಿಂದಲೂ ತೇಜಸ್ಸಿನಿಂದಲೂ ಶೋಭಿಸಬೇಕಾದರೆ ಶಾರೀರಿಕಬಲ ಮಾನಸಿಕಬಲ ಧಾರ್ಮಿಕಬಲ ಔದ್ಯೋಗಿಕಬಲ ಸಾಂಪತ್ತಿಕಬಲ ಇವೇ ಮೊದಲಾದ ಬಲಗಳು ಅತ್ಯಾವಶ್ಯಕವಾಗಿರುತ್ತವೆ. ಆದರೆ ಈ ಎಲ್ಲವುಗಳಿಗಿಂತ ಮೊದಲು ಸಮಾಜಕ್ಕೆ ಸಂಘಟನಾಬಲವು ಅವಶ್ಯವಾಗಿರುತ್ತದೆ. ಇದೊಂದಿಲ್ಲದಿದ್ದರೆ ಮೇಲೆ ಉದಹರಿಸಿದ ಎಲ್ಲ ಬಲಗಳು ವ್ಯಕ್ತಿಗತವಾಗಿ ಪರಿಣಮಿಸಿ ಅದರಿಂದ ಸಮಾಜಕ್ಕೆ ಮಹತ್ತರವ ಹಿತವನ್ನು ಸಾಧಿಸಲು ಅನುಕೂಲವಾಗುವದಿಲ್ಲ.

ವೀರಶೈವರ ಏಕೀಕರಣ ಅರ್ಥಾತ್ ಸಂಘಟನೆ ಎಂದರೇನೆಂಬುದು ಇನ್ನೂ ಸೂಜ್ಞ ವೀರಶೈವರಿಗೆಯೇ ತಿಳಿದಿರುವದಿಲ್ಲ. ಅಂದಬಳಿಕ ಹಳ್ಳಿಯಲ್ಲಿರುವ ಅಜ್ಞಜನರ ವಿಷಯಕ್ಕಂತೂ ಕೇಳಲೇಬಾರದು. ವೀರಶೈವ ಸಂಘಟನೆ ಎಂದ ಕೂಡಲೇ ಅವರು ಆಚಾರಲೋಪ ಧರ್ಮಲೋಪ ಜಾತಿಲೋಪವೆಂದು ತಿಳಿಯುತ್ತಾರೆ. ಆದರೆ ಹೀಗೆನ್ನುವದು ಅವರ ಕೇವಲ ಅಜ್ಞಾನ ದ್ಯೋತಕವಲ್ಲದೆ ಮತ್ತೇನು? ವಿಚಾರ

ಮಾಡಿನೋಡಿದರೆ ವೀರಶೈವ ಸಂಘಟನೆ ಎಂದರೆ ಏಕಂಕಾರವೂ ಅಲ್ಲ, ಗೋಲಂಕಾರವೂ ಅಲ್ಲ. ವೀರಶೈವ ಸಮಾಜದ ಹಕ್ಕು ಬಾಧ್ಯತೆಗಳ ಮೇಲೆ ಅನ್ಯಸಮಾಜದವರಿಂದ ಆಗುವ ಅಘಾತಗಳನ್ನು ಹಾಗೂ ಆಕ್ರಮಣಗಳನ್ನು ತಡೆಯುವದೇ ವೀರಶೈವ ಸಂಘಟನೆಯಾಗಿರುತ್ತದೆ. ಹಿಂದೊಮ್ಮೆ ಬಸವಾದಿ ಪ್ರಮಥರ ಕಾಲಕ್ಕೆ ವೀರಶೈವರ ಅಭ್ಯುದಯ ಸೂರ್ಯನು ನಡುನೆತ್ತಿಯ ಮೇಲೆ ಬಂದು ಅತ್ಯಂತ ಪ್ರಖರತೆಯಿಂದ ಮೆರೆಯುತ್ತಿದ್ದು ಅನಂತರ ಅನೇಕ ಕಾರಣಗಳ ಮೂಲಕ ದೂರ ಸರಿಯುತ್ತ ಸರಿಯುತ್ತ ಈಗಂತೂ ಮುಳಗುವ ಸ್ಥಿತಿಗೆಯೇ ಬಂದವನಾಗಿದ್ದು ಆ ಅಭ್ಯುದಯ ಸೂರ್ಯನ ಅವನತಿಗೆ ಕಾರಣಗಳಾವವೋ ಅವುಗಳನ್ನು ಶೋಧಮಾಡಿ ವೀರಶೈವ ಸಮಾಜದ ಪುನರ್ಘಟನೆಯನ್ನುಂಟು ಮಾಡುವದೇ ವೀರಶೈವ ಸಂಘಟನೆಯಾಗಿರುತ್ತದೆ. ಸಂಸ್ಕೃತಿ ದೃಷ್ಟಿಯಿಂದಲೂ ರಾಷ್ಟ್ರೀಯ ದೃಷ್ಟಿಯಿಂದಲೂ ಸಾಮಾಜಿಕ ದೃಷ್ಟಿಯಿಂದಲೂ ಧಾರ್ಮಿಕ ದೃಷ್ಟಿಯಿಂದಲೂ ವೀರಶೈವ ಸಮಾಜವು ಬಲವುಳ್ಳದ್ದಾಗುವಂತೆ ಮಾಡುವದೇ ವೀರಶೈವ ಸಂಘಟನೆಯಾಗಿದೆ.

## ಸಂಸ್ಕೃತಿಯ ಮಹತ್ವ.

ಸಂಸ್ಕೃತಿ ಎಂದರೆ ಮಾನವರ ಮನಸ್ಸಿನ ಮೇಲಿನ ಸಂಸ್ಕಾರವು. ಭಾಷೆ, ಶಾಸ್ತ್ರ, ಕಲಾಕೌಶಲ್ಯ, ಧರ್ಮ ಮೊದಲಾದವುಗಳು ಮಾನವರ ವ್ಯವಹಾರದೊಳಗೆ ಅನೇಕ ರೂಪದಿಂದ ಸ್ಫುಟವಾಗುವ ಸಂಸ್ಕಾರಗಳ ಸಮುಚ್ಚಯಗಳಿಗೆ ಸಂಸ್ಕೃತಿ ಎನ್ನುತ್ತಾರೆ. ಈಗ ಇಂಥ ಪ್ರಮುಖ ಸಮಾಜಗಳೆಂದರೆ ಕ್ರಿಶ್ಚನ್, ಬೌದ್ಧ, ಇಸ್ಲಾಮ, ಹಿಂದೂ ಈ ನಾಲ್ಕೇ ಸಮಾಜಗಳೆಂದು ಹೇಳಬಹುದು.

೧೯೩೭ನೇ ಇಸ್ವಿಯ ವರೆಗಿನ ಗಣನೆಯ ಮೇರೆಗೆ ಇಡೀ ಭೂಮಂಡಲದಲ್ಲಿ ೨ ಅಬ್ಜ ೧೩ ಕೋಟಿ ೪೦ ಲಕ್ಷ ಜನರು ಇರುವರೆಂದು ಗೊತ್ತಾಗಿದೆ. ಇದರಲ್ಲಿ ಕೆಲವು ಕೋಟಿ ಕಾಡುಜನರಿರುವರೆಂದೂ ಕೆಲವು ಕೋಟಿ ನಾಸ್ತಿಕ ಜನರು ಇರುವರೆಂದೂ ತಿಳಿದರೂ ೭೫ ಕೋಟಿಯ ವರೆಗೆ ಕ್ರಿಶ್ಚನ್ ಸಂಸ್ಕೃತಿಯ ಜನರೂ ೨೫ ಕೋಟಿಯ ವರೆಗೆ ಇಸ್ಲಾಮ ಸಂಸ್ಕೃತಿಯ ಜನರೂ ಇದ್ದು ಇವರೆಲ್ಲರೂ ಶಾಸ್ತ್ರ ಹಾಗೂ ಶಸ್ತ್ರ ಮತ್ತು ಸತ್ತೆ ಇವುಗಳಿಂದ ಸಂಪನ್ನರಾಗಿದ್ದಾರೆ. ಆದರೆ ನಮ್ಮ ಹಿಂದೂ

ಸಮಾಜವು ಕೂಡಾ ೨೫ ಕೋಟಿಯ ವರೆಗೆ ಇದ್ದರೂ ಇದು ಛಿನ್ನ ವಿಚ್ಛಿನ್ನವಾಗಿಯೂ ಅವ್ಯವಸ್ಥಿತವಾಗಿಯೂ ಅತ್ಯಂತ ದುರ್ಬಲವುಳ್ಳದ್ದಾಗಿಯೂ ಇದೆ. ಇಂಥ ಸಮಾಜದಲ್ಲಿಯೇ ಒಂದು ಅಂಗವಾಗಿರುವ ನಮ್ಮ ವೀರಶೈವ ಸಮಾಜವು ೩೦ ರಿಂದ ೩೫ ಲಕ್ಷದ ವರೆಗೆ ಇರುವದು. ಈ ಅಲ್ಪ ಸಂಖ್ಯಾಕವಾದ ಸಮಾಜಕ್ಕಂತೂ ತನ್ನಲ್ಲಿ ಸತ್ತೆಯೂ ಇಲ್ಲ, ಸಾಮರ್ಥ್ಯವೂ ಇಲ್ಲ, ಹೊರಗೆ ರಕ್ಷಣವೂ ಇಲ್ಲ. ಮತ್ತೆ ತನ್ನೊಳಗಿನ ಯಾದವೀ ಕಲಹದಿಂದ ಅದು ಸಮೂಲ ನಷ್ಟವಾಗಿ ಹೋಗುವದೋ ಏನೋ ಎಂಬುವ ಸಂಶಯ ಸ್ಥಿತಿಯಲ್ಲಿದೆ. ಇಂಥ ಮರಣೋನ್ಮುಖ ಸ್ಥಿತಿಯಲ್ಲಿರುವ ಸಮಾಜವು ಸಜೀವವಾಗುವಂತೆಯೂ ಸಮರ್ಥವಾಗುವಂತೆಯೂ ಮಾಡಲು ಸಂಘಟನೆಯೇ ಅತ್ಯವಶ್ಯಕವಾದುದಲ್ಲವೇ? ಹಿಂದೂಸಮಾಜದ ಭಾಗಗಳಾಗಿರುವ ಇತರ ಅನೇಕ ಸಮಾಜಗಳು ತಮ್ಮ ತಮ್ಮ ಸಂಸ್ಕೃತಿಯನ್ನೂ ಸಾಮರ್ಥ್ಯವನ್ನೂ ಹೆಚ್ಚಿಸಿಕೊಳ್ಳಲು ಅತ್ಯಂತ ತೀವ್ರಗತಿಯಿಂದ ಪ್ರಯತ್ನಿಸುತ್ತಿರಲು ನಮ್ಮ ವೀರಶೈವ ಸಮಾಜವು ಕೂಡ ಅವುಗಳಂತೆ ಸಾಮರ್ಥ್ಯವುಳ್ಳದ್ದಾಗುವಂತೆ ಮಾಡುವಲ್ಲಿ ಮೊದಲನೇ ಕಾರ್ಯವೆಂದರೆ ಸಂಘಟನೆಯೇ ಸರಿ.

## ರಾಜಕೀಯ ಮಹತ್ವ.

ರಾಜಕಾರಣ ದೃಷ್ಟಿಯಿಂದಲೂ ವೀರಶೈವ ಸಮಾಜವು ಸಂಘಟನೆಯುಳ್ಳದಾಗಲು ಅವಶ್ಯಕವಾಗಿದೆ. ಹಿಂದುಸ್ಥಾನ ದೇಶಕ್ಕೆ ಸ್ವರಾಜ್ಯವು ಬೇಕೆನ್ನುವ ಮಾತಿನಲ್ಲಿ ಯಾರದು ವಿರುದ್ಧವಿಲ್ಲವಷ್ಟೇ? ಆದರೆ ಸ್ವರಾಜಪ್ರಾಪ್ತಿಗೆ ಪ್ರಯತ್ನಿಸುವದಕ್ಕಾಗಿಯೂ ದೊರೆತ ಸ್ವರಾಜ್ಯವನ್ನು ಕರ್ನಾಟಕಪ್ರಾಂತದ ವತಿಯಿಂದ ಚನ್ನಾಗಿ ಆಳುವದಕ್ಕಾಗಿಯೂ ವೀರಶೈವ ಸಮಾಜವು ಯೋಗ್ಯತೆಯುಳ್ಳದ್ದಾಗುವದು ಅಗತ್ಯವಾದುದ್ದಾಗಿದೆ. ಭವಿಷ್ಯತ್ಕಾಲದಲ್ಲಿ ಪ್ರಜಾಸತ್ತೆಯು ಸ್ಥಾಪನೆಯಾಗುವದು ನಿಶ್ಚಿತವದೆ. ಅಂದಬಳಿಕ ಕರ್ನಾಟಕದಲ್ಲಿಯ ಪ್ರಜಾಸತ್ತೆಯಲ್ಲಿ ಬಹು ಸಂಖ್ಯಾಕರಾದ ವೀರಶೈವ ಸಮಾಜವು ಪ್ರತಿಬಿಂಬಿಸುವದು ಅತ್ಯಂತ ಅವಶ್ಯಕವಲ್ಲವೇ? ಹಿಂದುಸ್ಥಾನದಲ್ಲಿಯ ಬೇರೆ ಬೇರೆ ಪ್ರಾಂತಗಳಲ್ಲಿರುವ ಬಹು ಸಂಖ್ಯಾಕರಾದ ಜನರು ರಾಜ್ಯಪದ್ಧತಿಯಲ್ಲಿ ತಮ್ಮ ತಮ್ಮ ಸಂಸ್ಕೃತಿಯನ್ನು ಸ್ಪಷ್ಟವಾಗಿ ದೃಗ್ಗೋಚರ ಮಾಡುತ್ತಲಿರುವರು. ಆದರಂತೆ ಕರ್ನಾಟಕದಲ್ಲಿ ಬಹು ಸಂಖ್ಯಾಕರಾದ ವೀರಶೈವರು ಕೂಡ ಅಲ್ಪ ಸಂಖ್ಯಾಕರ

ಹಿತಕ್ಕೆ ಬಾಧೆ ಬರದಂತೆ ತಮ್ಮ ಸಂಸ್ಕೃತಿಯ ಹೆಚ್ಚಳವನ್ನು ಮಾಡಿ ತೋರಿಸುವದು ವಿಹಿತವಾದದ್ದಿರುತ್ತದೆ. ಪ್ರಯುಕ್ತ ಭಾವೀಕಾಲದಲ್ಲಿಯು ಪ್ರಜಾಸತ್ತಾತ್ಮಕ ರಾಜಪದ್ಧತಿಯಲ್ಲಿ ವೀರಶೈವ ಸಂಸ್ಕೃತಿಯ ವೈಶಿಷ್ಟ್ಯ ವನ್ನು ಕಾಯುವದರ ಸಲುವಾಗಿ ವೀರಶೈವ ಸಮಾಜವು ಈಗಿನಿಂದಲೇ ಸಂಘಟನೆಯುಳ್ಳದ್ದಾಗುವಂತೆ ಪ್ರಯತ್ನಿಸುವದು ಯೋಗ್ಯವಲ್ಲವೇ?

## ವೀರಶೈವರಲ್ಲಿ ಜಾತಿ ಭೇದಗಳಿಲ್ಲ.

ವಾಚಕ ಮಹಾಶಯರೇ, ನಾವೆಲ್ಲರೂ ನಮ್ಮ ವೀರಶೈವ ಸಮಾಜದ ವಿಷಯವಾಗಿ ವಿಶೇಷ ಹೆಮ್ಮೆ ಪಡಬೇಕಾಗಿದೆ. ಯಾಕಂದರೆ ಶಾಸ್ತ್ರ ಹಾಗೂ ವ್ಯವಹಾರ ದೃಷ್ಟಿಯಿಂದ ವೀರಶೈವ ಸಮಾಜವು ಸಂಘಟನೆ ಯುಳ್ಳದ್ದಾಗಲು ಒಳ್ಳೇ ಅನುಕೂಲತೆಯುಳ್ಳದ್ದಿರುವದು. ಯಾವ ಬ್ರಾಹ್ಮಣ ಸಮಾಜವು ಚಾತುರ್ವರ್ಣಗಳೇ ತನ್ನ ವೈಶಿಷ್ಟ್ಯವೆಂದು ಹೇಳುತ್ತ ಬಂದಿರುವದೋ ಅದೇ ಬ್ರಾಹ್ಮಣ ಸಮಾಜವು ಈಗ ವರ್ಣಬದ್ಧವಾಗಿರದೆ ಜಾತಿಬದ್ಧವಾಗಿದೆಯೆಂದೂ ಮೊದಲು ವರ್ಣಬದ್ಧವಾಗಿದ್ದುದೇ ಹಿಂದುಸ್ಥಾನದ ಅವನತಿಗೆ ಕಾರಣವಾಯಿತೆಂದೂ ಅದೇ ಸಮಾಜದಲ್ಲಿಯು ಅನೇಕ ವಿದ್ವಾಂಸರು ನಿಷ್ಪಕ್ಷಪಾತದಿಂದ ಸಾರಿ ಹೇಳಹತ್ತಿದ್ದಾರೆ. ಆದರೆ ಇತ್ತೀಚೆಗೆ ನಮ್ಮಲ್ಲಿಯು ಕೆಲವರು ತಾವೂ ಬ್ರಾಹ್ಮಣರಾಗಬೇಕೆಂಬ ಕುತೂಹಲದಿಂದ ನಮ್ಮಲ್ಲಿಯೂ ಚಾತುರ್ವರ್ಣಗಳಿವೆ ಎಂದು ಹೇಳಹತ್ತಿದ್ದಾರೆ. ಅವರಿಗೆ ನಮ್ಮ ಸಮಾಜದಲ್ಲಿ ವರ್ಣವ್ಯವಸ್ಥೆ ಮಾಡಿ ತೋರಿಸಿರೆಂದು ಕೇಳಿದರೆ ಬಾಯಿ ಬೆಳ್ಳಗೆ ಮಾಡಿಕೊಂಡು ಕೂಡ್ರುತ್ತಾರೆ. ಇರಲಿ.

ಎಲ್ಲ ಶಿವಾಗಮಗಳಲ್ಲಿ ಸೂಕ್ಷ್ಮಾಗಮವೇ ಅಧಿಕ ಪ್ರಮಾಣ ಭೂತವಾದುದೆಂದು ಆ ಸೂಕ್ಷ್ಮಾಗಮದ ಮೊದಲನೆಯ ಪಟಲದಲ್ಲಿ ಪರಮಾತ್ಮನೇ ಹೇಳಿದ್ದಾನೆ. ಆ ಆಗಮದಲ್ಲಿಯೇ ಎಲ್ಲ ವೀರಶೈವರಿಗೂ ಒಂದೇ ಒಂದಾದ ಶಿವಗೋತ್ರ ಮತ್ತು ಶಿವಸೂತ್ರವು ಇರುವವೆಂದು ಸ್ಪಷ್ಟವಾಗಿ ಹೇಳಿದೆ. "ಗೋತ್ರಂ ಚ ಶಿವಗೋತ್ರಂ ಚ ನಾಮಾಪಿ ಶಿವನಾಮ ಚ ಸದಾ ಶಿವೌಚ ಪಿತರೌ ಬಾಂಧವಾಃ ಶಿವಕಿಂಕರಾಃ (ಶ್ಲೋಕ ೪೧) ಪಟಲ ೭ ಸೂಕ್ಷ್ಮಾಗಮ). ಇನ್ನು ಕೆಲವರ ಅಭಿಪ್ರಾಯದಂತೆ ನಮಗೆ ಪಂಚ ಗೋತ್ರಗಳೂ ಪಂಚಸೂತ್ರಗಳೂ ಇವೆ ಎಂದು ಗ್ರಹಿಸಿದರೂ ಆ ಪ್ರತಿ

ರೊಂದು ಗೋತ್ರಸೂತ್ರಗಳಿಗೆ ವೀರಶೈವರಲ್ಲಿಯೇ ಬೇರೆ ಬೇರೆ ಪಂಗಡದವರೆಂದು ತಿಳಿಯುವ ಅಯ್ಯನವರು ಬಣಜಿಗರು ಪಂಚಮಸಾಲಿಯವರು ರಡ್ಡೇರು ಕುಡುವಕ್ಕಲಿಗರು ಆದಿಬಣಜಿಗರು ಗಾಣಿಗರು ಜೇಡರು ನೊಣಬರು ಸಾದರು ಉಪ್ಪಾರರು ಇವರೇ ಮೊದಲಾದವರೆಲ್ಲರು ಸಮಾನ ಸಂಬಂಧವುಳ್ಳವರಿದ್ದದ್ದು ಎಲ್ಲರಿಗೂ ಗೊತ್ತಾದ ವಿಷಯವೇ ಆಗಿದೆ. ಇದರಂತೆ ಅಷ್ಟಾವರಣಗಳು ಪಂಚಾಚಾರಗಳು ಷಟ್ಸ್ಥಲಗಳು ಕೂಡಾ ಎಲ್ಲರಿಗೂಸಮಾನವಾದವುಗಳೇ ಇವೆ. ಅಂದ ಬಳಿಕ ನಮ್ಮ ಕುಲ ಮೇಲು, ತಮ್ಮ ಕುಲ ಮೇಲೆಂದು ಬಡಿದಾಡುವದರಲ್ಲಿ ಯಾವ ಪ್ರಯೋಜನವದೆ? ಇತ್ತ ಶಾಸ್ತ್ರಾಧಾರವೂ ಇಲ್ಲ, ಅತ್ತ ವ್ಯವಹಾರವೂ ಇಲ್ಲ. ಹೇಗೆಂದರೆ ಗುಡಿ ಮಠ ಮೊದಲಾದ ಸಾರ್ವಜನಿಕ ಸ್ಥಾನಗಳಲ್ಲಿ ಎಲ್ಲರೂ ಕೂಡಿಯೇ ಅಡಿಗೆ ಮಾಡಿ ಎಲ್ಲರೂ ಕೂಡಿಯೇ ಊಟೋಪಚಾರಗಳನ್ನು ಮಾಡುವದು ಎಲ್ಲರ ಅನುಭವದ ಮಾತೇ ಆಗಿರುವದು. ಇನ್ನು ಉಚ್ಚಕುಲದವರೆನಿಸಿಕೊಳ್ಳುವವರ ಮನೆಯಲ್ಲಿ ಕಡಿಮೆ ಕುಲದವರೆನಿಸಿಕೊಳ್ಳುವವರು ಅಡಿಗೆ ನೀರು ಮೊದಲಾದವುಗಳನ್ನು ಮಾಡುತ್ತ ಬಂದಿರುವದು ರೂಢಿಯ ವಿಷಯವೇ ಆಗಿರುವದು. ಹೀಗಿದ್ದು ಅವರೇ ತಮ್ಮ ತಮ್ಮ ಮನೆಯಲ್ಲಿ ಅಡಿಗೆಯನ್ನು ಮಾಡಿದರೆ ಊಟವನ್ನೇಕೆ ಮಾಡಬಾರದು? ಏನು ಮನೆಯೇ ಕುಲಗೇಡಿಯೋ? ವಿಚಾರ ಮಾಡಿ ನೋಡಿದರೆ ಇದರಲ್ಲಿ ಯಾವ ತರದ ಹುರುಳಿಲ್ಲ. ಊಟ ಮಾಡಬಾರದೆಂಬುವದು ಕೇವಲ ದುರಭಿಮಾನವೇ ಸರಿ.

ಮೊದಲೇ ಅಲ್ಪ ಸಂಖ್ಯಾಕವಾದ ನಮ್ಮ ವೀರಶೈವ ಸಮಾಜವು ಈ ದುರಭಿಮಾನದಿಂದ ತೀರ ಆಕುಂಚಿತವಾಗಹತ್ತಿದೆ. ಇನ್ನು ಮೇಲೆಯೂ ಸಹ ಈ ಸಮಾಜವು ತನ್ನಲ್ಲಿಯೇ ತುಂಡು ತುಂಡಾಗುತ್ತ ಹೋಗಹತ್ತಿದರೆ ಇದರ ಅಸ್ತಿತ್ವವೇ ನಾಮಶೇಷವಾಗುವದರಲ್ಲಿ ಸಂದೇಹವಿಲ್ಲ. ಪ್ರಯುಕ್ತ ವೀರಶೈವ ಸಮಾಜಹಿತಚಿಂತಕರೇ, ನಿಮಗೆ ವೀರಶೈವ ಸಮಾಜದ ವಿಷಯದಲ್ಲಿ ನೈಜವಾದ ಕಳಕಳಿಯು ಇದ್ದರೆ ಮೊದಲು ನಿಮ್ಮ ಸಮಾಜದಲ್ಲಿ ಐಕ್ಯತೆಯನ್ನುಂಟುಮಾಡುವದೇ ಮುಖ್ಯ ಕಾರ್ಯವೆಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಮೊದಲು ವೀರಶೈವರಲ್ಲಿಯ ಒಳಪಂಗಡಗಳು ಏಕೀಕರಣವಾಗುವಂತೆ ಪ್ರಯತ್ನಿಸಬೇಕು. ಎಲ್ಲ ಪಂಗಡಗಳಲ್ಲಿ ಪರಸ್ಪರ ಊಟೋಪಚಾರ ಮಾಡುವದಲ್ಲದೆ ಹೆಣ್ಣು ಗಂಡು

ಕೊಡತಕ್ಕೊಳ್ಳುವದನ್ನು ಕೂಡಾ ಮಾಡಬೇಕು. ಈ ಸಂಘಟನೆಗೆ ಪ್ರಯತ್ನಿಸುವವರಿಗೆ ಮೊದಲು ಮೊದಲು ಆತಂಕಗಳೂ ಅಡಚಣಿಗಳೂ ಬರುವದು ಸ್ವಾಭಾವಿಕವು. ಆದರೆ ಕಟ್ಟ ಕಡೆಗೆ ಅವರೇ ಸಮಾಜಕ್ಕೆ ಆದರ್ಶ ಪುರುಷರಾಗುತ್ತಾರೆ. ಕಷ್ಟದಂತೆ ಫಲವು ಸಿಕ್ಕೇ ಸಿಗುವದು. ಕಾರಣ ಧೈರ್ಯಶಾಲಿಗಳಾದ ಉತ್ಸಾಹೀ ಸುಶಿಕ್ಷಿತ ವೀರಶೈವ ಪುರುಷರು ಈ ಕಾರ್ಯಕ್ಕೆ ಮುಂದಡಿ ಇಡಲೆಂದು ಹಾರೈಸಿ ಈ ಲೇಖವನ್ನು ಪೂರೈಸುವೆನು.

---

## ಕಕ್ಕಯ್ಯನ ಸ್ವಸ್ಥಿಯ ವಚನ.

(ಲೇಖಕ:— ಮ. ಹ. ಪಾಟೀಲ. ಬಸವೇಶ್ವರ ಕಾಲೇಜ ಬಾಗಲಕೋಟ ಇವರಿಂದ ಸಂಗ್ರಹಿಸಲ್ಪಟ್ಟದ್ದು.)

ಅದಿ ಅನಾದಿ ನಿತ್ಯವ ತಿಳಿಯಲರಿಯದೆ ವಾಯಕ್ಕೆ ಪರಬ್ರಹ್ಮವ ನುಡಿಯುವ ವಾಯುಪ್ರಾಣಿಗಳೆತ್ತ ಬಲ್ಲರೋ. ಆ ಪರಬ್ರಹ್ಮದ ನಿಜದ ನಿಲವೆಂತೆಂದೊಡೆ:—ಆದಿಯೇ ದೇಹ. ಅನಾದಿಯೇ ನಿರ್ದೇಹ. ಆದಿಯೇ ಸಕಲ. ಅನಾದಿಯೇ ನಿಃಕಲ. ಆದಿಯೇ ಜಡ. ಅನಾದಿಯೇ ಅಜಡ. ಆದಿಯೇ ಕಾಯ. ಅನಾದಿಯೇ ಪ್ರಾಣ. ಈ ಎರಡರ ಯೋಗವ ಭೇದಿಸಿ ತನ್ನಿಂದ ತಾನೇ ತಿಳಿದು ನೋಡಲು ಆದಿಸಂಬಂಧವಪ್ಪ ಭೂತಂಗಳು ನಾನಲ್ಲ. ದಶವಿಧೇಂದ್ರಿಯಂಗಳು ನಾನಲ್ಲ. ಅಷ್ಟಮದಂಗಳು, ಅರಿಷಡ್ವರ್ಗಂಗಳು, ಷಡೂರ್ಮಿಗಳು, ಸಪ್ತವ್ಯಸನಂಗಳು, ಷಡ್ಭಾವವಿಕಾರಂಗಳು, ಷಟ್ಕರ್ಮಂಗಳು, ಷಡ್ಧಾತುಗಳು, ಸಪ್ತವ್ಯಸನಂಗಳು, ತನುತ್ರಯಂಗಳು, ಜೀವತ್ರಯಂಗಳು, ಆತ್ಮತ್ರಯಂಗಳು, ಮನತ್ರಯಂಗಳು, ಗುಣತ್ರಯಂಗಳು, ಭಾವತ್ರಯಂಗಳು, ತಾಪತ್ರಯಂಗಳು, ಅವಸ್ಥಾತ್ರಯಂಗಳು, ಅಂತಃಕರಣಂಗಳು, ಇಂತಿವಾದಿಯಾಗಿ ತೋರುವ ತೋರಿಕೆಯದು ನಾನಲ್ಲ. ನನ್ನೀನವಲ್ಲ. ಇಂತಿವೆಲ್ಲವು ನನ್ನಾಧೀನವಾಗಿಪ್ಪವು. ನಾನಿವರಾಧೀನದವನಲ್ಲ. ನಾನು ತೂರ್ಯ ತೂರ್ಯಾತೀತವಪ್ಪ ಸತ್, ಚಿತ್, ಆನಂದ ನಿತ್ಯ ಪರಿಪೂರ್ಣವಸ್ತುವೇ

ತನ್ನಿರವೆಂದು ತಿಳಿವೆ. ಆ ತಿಳಿದ ಮಾತ್ರದಲ್ಲಿಯೇ ಅನಿತ್ಯದ ಬೆಸುಗೆಯ ಬಿಟ್ಟು ನಿರಾಳದಲ್ಲಿ ನಿಜವನೆಯ್ದಲರಿಯವೆ, ಮತ್ತೆ ಭೌತಿಕತತ್ವ ಸಂಬಂಧಿಯಾಗುತ್ತಿರಲು, ಇಂತೀ ತತ್ವಾದಿ ತಾನೆಂತನಲು, ಆ ಪರಬ್ರಹ್ಮವಪ್ಪ ನಿತ್ಯ ನಿರಾಳ ನಿಃಶೂನ್ಯಲಿಂಗವೇ ತನ್ನ ಲೀಲಾ ವಿಲಾಸದಿಂದೆ ತಾನೇ ಸುನಾದ ಬಿಂದು ಪ್ರಕಾಶ ತೇಜೋಮೂರ್ತಿಯಾಗಿ ನಿಂದು, ಮಹಾಲಿಂಗವೆಂದೆನಿಸಿತ್ತು. ಆ ಮಹಾಲಿಂಗವೇ ಪಂಚಸಾದಾಖ್ಯವೆಂದೆನಿಸಿತ್ತು. ಆ ಪಂಚಸಾದಾಖ್ಯವೆ ಪಂಚಲಿಂಗ ಪ್ರಕಾಶವೆಂದೆನಿಸಿತ್ತು. ಆ ಪಂಚಲಿಂಗ ಪ್ರಕಾಶವೆ ಆ ಪಂಚಮುಖವೆಂದೆನಿಸಿತ್ತು. ಆ ಪಂಚಮುಖದಿಂದವೆ ಪಂಚಾಕ್ಷರಂಗಳುತ್ಪತ್ತಿ. ಆ ಪಂಚಾಕ್ಷರಂಗಳಿಂದವೆ ಪಂಚಕಲೆಗಳುತ್ಪತ್ತಿ. ಆ ಪಂಚಕಲೆಗಳಿಂದವೆ ಪಂಚಶಕ್ತಿಗಳುತ್ಪತ್ತಿ. ಆ ಶಕ್ತಿಗಳಿಂದವೆ ಜ್ಞಾನ, ಮನ, ಬುದ್ಧಿ, ಮತ್ತು ಅಹಂಕಾರಂಗಳು. ಜನನ. ಅಜ್ಞಾನ, ಮನ, ಬುದ್ಧಿ, ಚಿತ್ತ, ಅಹಂಕಾರಂಗಳಿಂದವೆ ಪಂಚತನ್ಮಾತ್ರಂಗಳುತ್ಪತ್ತಿ. ಆ ಪಂಚತನ್ಮಾತ್ರಂಗಳಿಂದವೆ ಪಂಚಭೂತಂಗಳುತ್ಪತ್ತಿ. ಆ ಪಂಚಭೂತಂಗಳಿಂದವೆ ಪಂಚೀಕರಣವನೆಯ್ದಿ ಆತ್ಮಂಗೆ ಅಂಗವಾಗಿತ್ತು. ಆ ಅಂಗಕ್ಕೆ ಜ್ಞಾನೇಂದ್ರಿಯಂಗಳು, ಕರ್ಮೇಂದ್ರಿಯಂಗಳು, ಪ್ರತ್ಯಂಗವೆನಿಸಿತ್ತು. ಇಂತೀ ದೇಹಸಂಬಂಧವುಂ ಶಿವನು ತನ್ನ ಚಿದಂಶಿಕನಪ್ಪ ಆತ್ಮಂಗೆ ಸಂಬಂಧಿಸಿದನು. ಆ ಸಂಬಂಧಿಸಿದ ಕಾಯದ ಪೂರ್ವಾಶ್ರಯವು ಇಲ್ಲವಾಯಿತ್ತು. ಅಲ್ಲಿಯೆ ಅಡಗಿಸಿ ಆ ಕಾಯದ ಪೂರ್ವಾಶ್ರಯವನರಿದು ಮಹಾಘನಲಿಂಗವ ವೇಧಿಸಿ ಕೊಟ್ಟ ಶಿವ ತಾನೆ ಗುರುವಾಗಿ ಬಂದು ಆ ಮಹಾಘನಲಿಂಗವ ವೇಧಿಸಿಕೊಟ್ಟ ಪರಿಕ್ರಮವೆಂತೆಂದೊಡೆ ಆತ್ಮಂಗೂಡಿ ಪಂಚಭೂತಂಗಳನೆ ಷಡಂಗವೆಂದೆನಿಸಿ, ಆ ಲಿಂಗಕ್ಕೆ ಕಲೆಗಳನೆ ಷಡ್ವಿಧಶಕ್ತಿಗಳೆಂದೆನಿಸಿ, ಆ ಶಕ್ತಿಗಳಿಗೆ ಷಡ್ವಿಧಭಕ್ತಿಗಳನಳವಡಿಸಿ, ಆ ಭಕ್ತಿಗಳಿಗೆ ಭಾವ, ಜ್ಞಾನ, ಮನ, ಬುದ್ಧಿ, ಚಿತ್ತ, ಅಹಂಕಾರಗಳನೆ ಷಡ್ವಿಧ-ಹಸ್ತಂಗಳೆಂದೆನಿಸಿ, ಆ ಹಸ್ತಂಗಳಿಗೆ ಮಹಾಲಿಂಗವಾದಿಯಾದ ಪಂಚಲಿಂಗಗಳನೆ ಷಡ್ವಿಧಲಿಂಗಂಗಳೆಂದೆನಿಸಿ, ಆ ಲಿಂಗಗಳಿಗೆ ಷಡಕ್ಷರಿಯನೆ ಷಡ್ವಿಧಮಂತ್ರಂಗಳೆಂದೆನಿಸಿ, ಆ ಮಂತ್ರಂಗಳಿಗೆ ಹೃದಯಗೂಡಿ ಪಂಚೇಂದ್ರಿಯಂಗಳನೆ ಷಡ್ವಿಧಮುಖಂಗಳೆಂದೆನಿಸಿ, ಆ ಮುಖಂಗಳಿಗೆ ಪಂಚತನ್ಮಾತ್ರಯಂಗಳನೆ ದ್ರವಪದಾರ್ಥಂಗಳೆಂದೆನಿಸಿ, ಆ ದ್ರವಪದಾರ್ಥಂಗಳಿಗೆ ಆಯಾಯ

ಮುಖಂಗಳಲ್ಲಿ ನಿರಂತರ ಸಾವಧಾನದಿಂದ ಅರ್ಪಿತವಾಗಲೊಡನೆ ಅಂಗ ಸ್ಥಲಂಗಳಡಗಿ, ತ್ರಿವಿಧಲಿಂಗಾಂಗ ಸ್ಥಲಂಗಳುಳಿದು, ಕಾಯ ಗುರು, ಪ್ರಾಣ ಲಿಂಗ, ಜ್ಞಾನ ಜಂಗಮ, ಗುರುವಿನಲಿ ಶುದ್ಧಪ್ರಸಾದ, ಲಿಂಗದಲ್ಲಿ ಸಿದ್ಧಪ್ರಸಾದ, ಜಂಗಮನಲ್ಲಿ ಪ್ರಸಿದ್ಧ ಪ್ರಸಾದ, ಇಂತಿಪ್ಪ ತ್ರಿವಿಧಪ್ರಸಾದದಲಿ ಏಕಾರ್ಥವಾಗಿ ಮಹಾಘನಪರಪೂರ್ಣ ಪ್ರಸಾದವನೆಯ್ದಿ, ಶರಣ ಜ್ಞಾನಿಯೆನಲ್, ಜ್ಞಾನಿ ಮುನ್ನಡಿಯಲ್ ಅಜ್ಞಾನಿಯೆನಲ್, ಅಜ್ಞಾನಿ ಮುನ್ನಡಿಯಲ್, ಶೂನ್ಯನೆನಲ್, ಶೂನ್ಯ ಮುನ್ನಡಿಯಲ್, ದ್ವೈತಿಯೆನಲ್, ದ್ವೈತಿಮುನ್ನಡಿಯಲ್, ಅದ್ವೈತಿಯೆನಲ್, ಅದ್ವೈತಿಮುನ್ನಡಿಯಲ್, ಉಭಯಾತ್ಮಕ ತಾನೆಯಾಗಿ, ಇದು ಕಾರಣ ಇದರಾಗು ಹೋಗು ಸಕೀಲಸಂಬಂಧವ ಮಲ್ಲಿಕಾರ್ಜುನಯ್ಯ ನಿಮ್ಮ ಶರಣರೇ ಬಲ್ಲರು.

---

## ಅನ್ಯದೇವತಾಭಜನೆಯನ್ನು ಮಾಡಬಾರದು.

( ಲೇಖಕ:— ಶಿವಮೂರ್ತಿ. )



ಅನ್ಯದೇವತಾಭಜನೆಗೆ ವಿಮುಖನಾಗಿರುವುದೇ ಹನ್ನೊಂದನೆಯ ಆಚಾರ. ೯ ನೆಯ ಆಚಾರದಲ್ಲಿ ಕೇಡು ಜನರ ಸಹವಾಸ ಮಾಡಕೂಡದೆಂದೂ ೧೦ ನೆಯ ಆಚಾರದಲ್ಲಿ ಸಜ್ಜನರ ಸಂಗವನ್ನು ಬಿಡಬಾರದೆಂದೂ ಹೇಳಿದ್ದಾರೆ. ಆದರೆ ೯-೧೦ ನೆಯ ಆಚಾರಗಳು ಎಲ್ಲರಿಗೂ ಸುಲಭವಾಗಿ ತಿಳಿಯುವದರಿಂದ ಅವುಗಳ ವಿವರವನ್ನು ಇಲ್ಲಿ ಮಾಡಿಲ್ಲ. ಆದರೆ ಅನ್ಯದೇವತಾಭಜನೆಯ ನಿರಾಕರಣವು ವೀರಶೈವರಿಗೆ ಪ್ರಾಮುಖ್ಯವಾಗಿರುವದರಿಂದ ಅದನ್ನು ಇದರಡಿಯಲ್ಲಿ ವಿವರಿಸಲಾಗಿದೆ.

ವೀರಶೈವರಿಗೆ ಶ್ರೀಗುರುವು ಕರುಣಿಸಿಕೊಟ್ಟ ಇಷ್ಟಲಿಂಗವೇ ಪರಮಾತ್ಮನ ಕುರುಹಾಗಿರುವದರಿಂದ ಅದರ ಪೂಜೆ-ಧ್ಯಾನ-ಭಜನೆಗಳನ್ನು ಮಾಡಬೇಕೇ ವಿನಾ ಇನ್ನುಳಿದ ಯಾವ ದೈವಗಳ ಪೂಜೆ ಭಜನೆಗ

ಳನ್ನು ಮಾಡಕೂಡದೆಂದು ವೀರಶೈವ ಮತವು ಸಾರುತ್ತದೆ. ಯಾಕಂದರೆ ದೇವರು ಒಬ್ಬನೇ ಇದ್ದಾನೆ. ಇಷ್ಟಲಿಂಗವೇ ಆ ದೇವರು. ಆದುದರಿಂದ ಬ್ರಹ್ಮ, ವಿಷ್ಣು, ಮಹೇಶ್ವರ, ಗಣಪತಿ, ಶಕ್ತಿ, ಸರಸ್ವತಿ, ಲಕ್ಷ್ಮಿ ಮೊದಲಾದ ಸುಧಾರಕ ದೇವರುಗಳನ್ನು ವೀರಶೈವರು ಮನ್ನಿಸುವದಿಲ್ಲ. ಅದರಂತೆ ಮಾರಿ, ಮಸಣಿ, ಲಕ್ಕವ್ವ, ದ್ಯಾಮವ್ವ ದುರಗವ್ವ, ಮರಗವ್ವ ಮೊದಲಾದ ಅನಾಗರಿಕ ದೇವರುಗಳಿಗೂ ಅವರು ಮಹತ್ವಕೊಟ್ಟಿಲ್ಲ. ಗುಡಿಗುಂಡಾರ ತೀರ್ಥಕ್ಷೇತ್ರಗಳಲ್ಲಿ ಪ್ರಸ್ಥಾಪಿತವಾದ ಈಶ್ವರ, ಹನುಮಂತ, ವೀರಭದ್ರ, ಬಸವಣ್ಣ, ಪಾಂಡುರಂಗ, ಲಕ್ಷ್ಮೀನಾರಾಯಣ ಇತ್ಯಾದಿ ದೇವರುಗಳನ್ನೂ ಸಹ ವೀರಶೈವರು ನಿರಾಕರಿಸುವರು. ಅದರಂತೆ ಸೂರ್ಯ, ಚಂದ್ರ, ವರುಣ, ವಾಯು, ಅಗ್ನಿ ಮೊದಲಾದ ನಿಸರ್ಗರೂಪಗಳನ್ನೂ ವೀರಶೈವರು ದೇವರೆಂದು ತಿಳಿಯುವದಿಲ್ಲ. ಇಷ್ಟಲಿಂಗವೊಂದೇ ವೀರಶೈವರಿಗೆ ಪರದೈವವು.

ಜಗತ್ತಿನ ಆಸ್ತಿಕ ಧರ್ಮಗಳಲ್ಲಿ ನಾನಾ ದೈವಂಗಳು ಪರಮಾತ್ಮನ ಅನಂತ ಗುಣಶಕ್ತಿಗಳ ಪ್ರತೀಕಗಳೆಂದು ಭಾವಿಸಿ ಅವುಗಳ ಭಿನ್ನ ಭಿನ್ನ ನಾಮರೂಪಗಳನ್ನು ಕಲ್ಪಿಸಿ ಕೆಲವರು ಅವುಗಳ ಉಪಾಸನೆಯನ್ನು ಮಾಡುವದುಂಟು. ಈ ಎಲ್ಲ ದೇವರುಗಳಿಗೆ ಮಾಡುವ ನಮಸ್ಕಾರವು ವಿಶ್ವವ್ಯಾಪಿಯಾದ ಪರಮಾತ್ಮನಿಗೇ ಮುಟ್ಟುತ್ತದೆಂದು ಅವರ ಮತ. ಅದಕ್ಕಾಗಿ 'ಸರ್ವದೇವ ನಮಸ್ಕಾರಂ ಕೇಶವಂ ಪ್ರತಿಗಚ್ಛತಿ' ಎಂಬುದಾಗಿ ಹೇಳಿದ್ದಾರೆ. ಈ ಉದ್ದೇಶಗಳನ್ನಿಟ್ಟುಕೊಂಡೇ ಅವರು ಪರಮಾತ್ಮನ ಅನಂತ ಗುಣಶಕ್ತಿಗಳನ್ನೊಳಕೊಂಡ ವಿಗ್ರಹಗಳನ್ನು ಪುಣ್ಯಕರವಾದ ಮತ್ತು ಮಂಗಲಕರವಾದ ತೀರ್ಥಕ್ಷೇತ್ರಗಳನ್ನು ಸ್ಥಾಪಿಸಿ ಜನತೆಯಲ್ಲಿ ಭಕ್ತಿ ಭಾವಗಳನ್ನು ಬೆಳೆಸಿದ್ದೂ ಉಂಟು. ಆದರೆ ಗುಡಿಗುಂಡಾರಗಳ ದೇವರುಗಳಿಗೂ ಇಷ್ಟಲಿಂಗಕ್ಕೂ ಮಹದಂತರವಿದೆ.

ಗುಡಿಗುಂಡಾರಗಳ ದೇವರು ಸಾಮೂಹಿಕ ಪೂಜೆಗೆ ತಕ್ಕವಲ್ಲದೆ ಇಷ್ಟಲಿಂಗದಂತೆ ವ್ಯಕ್ತಿ ಪೂಜೆಗೆ ತಕ್ಕವಲ್ಲ. ದೇವರ ದರ್ಶನಕ್ಕೆ ಮನೆಮಾರು ಬಿಟ್ಟು ಗುಡಿಗುಂಡಾರಕ್ಕೆ ಹೋಗುವ ಅಡಚಣಿಯು ಎದೆಯ ಮೇಲಿರುವ ಲಿಂಗಪೂಜೆಗೆ ಬರುವದಿಲ್ಲ. ಇಂಥ ಕ್ಲಪ್ತವಾದ ವೇಳೆಯಲ್ಲಿಯೇ ಗುಡಿಯ ದೇವರ ದರ್ಶನಕ್ಕೆ ಹೋಗಬೇಕೇ ವಿನಾ ಇಷ್ಟಲಿಂಗದಂತೆ ಸದಾ ದೇವದರ್ಶನವು ನಮಗೆ ದೊರಕುವದಿಲ್ಲ. ಬೇರೆ ಬೇರೆ ದೇವರುಗಳು ಬೇರೆ ಬೇರೆ ಗುಣಶಕ್ತಿಗಳನ್ನು ಮಾತ್ರ ಅಳವಡಿ

ಸಿಕೊಂಡಿರುವಲ್ಲಿ ಇಷ್ಟಲಿಂಗವು ಅನಂತ ಗುಣಶಕ್ತಿಗಳ ಪರಂಧಾಮವಾಗಿರುತ್ತದೆ. ಪರಸ್ಥಳಕ್ಕೆ ಹೋದರೆ ಗುಡಿಯ ದೇವರ ದರ್ಶನ ತಪ್ಪುವಂತೆ ಇಷ್ಟಲಿಂಗದ ದರ್ಶನವೇನೂ ತಪ್ಪುವದಿಲ್ಲ. ಇಷ್ಟಲಿಂಗದ ಪೂಜೆ ಧ್ಯಾನ-ಭಜನೆಗಳಿಗಿರುವಷ್ಟು ಅನುಕೂಲತೆಗಳೂ ಸೌಕರ್ಯಗಳೂ ಬೇರಾವ ದೇವರಿಗೂ ಇರಲಾರವು. ನಮಗೆ ಇಷ್ಟವಾದ ಹೆಸರಿನಿಂದ ನಮ್ಮ ಲಿಂಗ ದೇವನನ್ನು ನಾವು ಕರೆಯಬಹುದು. ಆದುದರಿಂದ ಸಾಕಾರ ಪೂಜೆಯಲ್ಲಿ ಇಷ್ಟಲಿಂಗ ಪೂಜೆಯೇ ಶ್ರೇಷ್ಠವೆಂದು ಸಹಜವಾಗಿ ಒಪ್ಪುವ ಮಾತಾಗಿದೆ.

ಇನ್ನು ಆಸ್ತಿಕರಲ್ಲಿ ಕೆಲವರು ನಿರಾಕಾರವಾದಿಗಳಿರುವರು. ಅವರು ಪರಮಾತ್ಮನ ಸಾಕಾರ ವಿಗ್ರಹಗಳನ್ನೊಪ್ಪುವದಿಲ್ಲ. ಪ್ರಸಂಗ ಬಂದರೆ ಮೂರ್ತಿಗಳನ್ನು ಭೇದಿಸುವರು. ಅವರು ಕೇವಲ ನಿರಾಕಾರ ನಿರ್ಗುಣನಾದ ಪರವಸ್ತುವನ್ನಾರಾಧಿಸುವರು. ಪರಮಾತ್ಮನು ನಿರಾಕಾರನೂ ನಿರ್ಗುಣನೂ ಇರುವದೇನೋ ನಿಜ. ಅದರಂತೆ ಆತನು ಸಾಕಾರನೂ ಇದ್ದಾನೆಂಬುದೂ ನಿಜ. ಪರವಸ್ತುವಿನ ನಿಜತ್ವವನ್ನರಿಯಬೇಕಾದರೆ ಸಾಕಾರವಿಡಿದೇ ನಿರಾಕಾರದ ಮೆಟ್ಟಲನ್ನು ಹತ್ತಬೇಕೆಂದೂ ಕೇವಲ ನಿರಾಕಾರೋಪಾಸನೆಯು ಬಟ್ಟಬಯಲೆಂದೂ ನಮ್ಮವರು ಹೇಳುವದುಂಟು. ಬರೇ ನಿರಾಕಾರದ ಪೂಜಾ ಪ್ರಾರ್ಥನೆಗಳಿಂದ ದೈವೀಶಕ್ತಿಯು ಬಹು ಶೀಘ್ರವಾಗಿ ಮತ್ತು ಸುಲಭವಾಗಿ ಅಳವಡದೆಂದು ನಮ್ಮವರ ಮತ. ಅಂತೆಯೇ ಅವರು ಇಷ್ಟ ಪ್ರಾಣ ಭಾವಲಿಂಗಗಳನ್ನು ಕಲ್ಪಿಸಿರುವರು. ಇಷ್ಟವೇ ಸಕಲ (ಸಾಕಾರ), ಪ್ರಾಣವೇ ಸಕಲ ನಿಃಕಲ (ಸಾಕಾರ-ನಿರಾಕಾರ) ಭಾವವೇ ನಿಃಕಲ (ನಿರಾಕಾರ), ಅಂದರೆ ಯಾವ ಇಷ್ಟಲಿಂಗವನ್ನು ನಾವು ಬಾಹ್ಯದಲ್ಲಿ ಅರ್ಚಿಸುವೆವೋ ಅದರ ಅಸ್ತಿತ್ವವು ಮನದಲ್ಲಿಯೂ ಉಂಟು. ಆದರೆ ಬಾಹ್ಯದಂತೆ ಅದಕ್ಕೆ ಘನರೂಪವಾದ ಅಸ್ತಿತ್ವವಿಲ್ಲ. ಆದುದರಿಂದ ಪ್ರಾಣಲಿಂಗಕ್ಕೆ ಸಾಕಾರ ನಿರಾಕಾರವೆಂಬ ಹೆಸರು. ಆ ಪ್ರಾಣಲಿಂಗಾನುಸಂಧಾನದಿಂದ ಮನುಷ್ಯನು ತನ್ಮಯನಾಗಿ ಪಾರವಶ್ಯವನ್ನು ಹೊಂದಲು ಎಲ್ಲವೂ ನಿರಾಕಾರ ನಿರ್ಗುಣ ನಿಶ್ಶೂನ್ಯಮಯವಾಗಿ ತೋರುವದು. ಅದೇ ಭಾವಲಿಂಗ ಪೂಜೆಯು. ಇದೇ ನಿರಾಕಾರ ಪೂಜೆಯು. ಇದೇ ವೀರಶೈವರು ಸಾಧಿಸುವ ಕೊನೆಯ ಗುರಿಯು. ಆದುದರಿಂದ ಕೇವಲ ನಿರಾಕಾರ ಪೂಜೆಗಿಂತಲೂ ಸಾಕಾರವಿಡಿದು ನಿರಾಕಾರಕ್ಕೆ ಸಾಗುವ ಪೂಜೆಯು ಅತಿ ಶ್ರೇಷ್ಠವೆಂದು ವೀರಶೈವರ ಮತವು.

ಆದುದರಿಂದ ಷಣ್ಮುಖ ಸ್ವಾಮಿಗಳು ತಮ್ಮದೊಂದು ವಚನದಲ್ಲಿ ಅಪ್ಪಣೆಕೊಡಿಸಿರುವದೇನಂದರೆ "ಶ್ರೀ ಗುರುಸ್ವಾಮಿಯು ಕರುಣಿಸಿ ಕೊಟ್ಟ ಇಷ್ಟಲಿಂಗವನ್ನು ಉರದಲ್ಲಿ ಧರಿಸಿಕೊಂಡು ಅದು ದೇವರೆಂದು ನಂಬದೆ ಧರೆಯ ಮೇಲೆ ಕಂಡ ಕಂಡ ದೇವರ ಕಂಡು ಕಲ್ಪಿಸಿ ಹರಿದಾಡುವ ಭಂಡ ಮಾದಿಗರ ಭಕ್ತರೆಂದರೆ ಅಘೋರ ನರಕ ತಪ್ಪದಯ್ಯಾ ಅಖಂಡೇಶ್ವರಾ." ಇದೇ ವಿಷಯದಲ್ಲಿ ಅಂಬಿಗರ ಚೌಡಯ್ಯನವರು ಹೇಳಿರುವದೇನಂದರೆ— "ಕಟ್ಟಿದಾ ಲಿಂಗವ ಬಿಟ್ಟು ಬೆಟ್ಟದಾ ಲಿಂಗಕ್ಕೆ ಹೋಗಿ ಹೊಟ್ಟೆಯಡಿಯಾಗಿ ಬೀಳುವ ಲೊಟ್ಟೆ ಮೂಳನ ಕಂಡೊಡೆ ಎಡಪಾದ ರಕ್ಷೆಯ ತೆಗೆದುಕೊಂಡು ಲಟಲಟನೆ ಹೊಡೆಯೆಂದಾತ ನಮ್ಮ ಅಂಬಿಗರ ಚೌಡಯ್ಯನು." ಇಷ್ಟಲಿಂಗವ ಕಟ್ಟಿಕೊಂಡಿದ್ದರೂ ಕೆಲವು ಸಾಮಾನ್ಯ ಜನರು ತಿಳಿಯದೆ 'ಗತಾನುಗತಿಕೋ ಲೋಕಃ' ಎಂಬಂತೆ ಇನ್ನುಳಿದ ಜನರನ್ನು ನೋಡಿ ಗುಡಿಗುಂಡಾರಗಳಿಗೆ ಹೋಗುತ್ತಿರುವವನ್ನು ಕಂಡು ಅಂಥವರಿಗೆ ಶರಣರು ಕಿವಿಹಿಂಡಿ ಬುದ್ಧಿ ಹೇಳಿದ್ದಾರೆ.

ವೀರಶೈವರಲ್ಲಿ ದೇವಭಕ್ತ ಸಂಬಂಧವು ಸತಿ ಪತಿಗಳ ಸಂಬಂಧದಂತಿರುವದು. ಉಳಿದ ಮತದವರು ತಮ್ಮ ದೇವರನ್ನು ತಾಯಿ-ತಂದೆ-ಗುರು-ಮಿತ್ರರಂತೆ ಕಾಣುವರು. ಬಹು ಜನರನ್ನು ತಾಯಿ ತಂದೆಗಳೆಂದು ಭಾವಿಸಿ ವರ್ತಿಸಿದರೆ ಯಾವ ದೋಷವೂ ಇಲ್ಲ. ಆದರೆ ಸತಿಯು ಅನೇಕರನ್ನು ಪತಿಗಳೆಂದು ಭಾವಿಸಿದರೆ ವ್ಯಭಿಚಾರ ದೋಷವು ತಟ್ಟುವದು. ಆದರೆ ವೀರಶೈವರು 'ಶರಣ ಸತಿ ಲಿಂಗ ಪತಿ' ಎಂಬ ಭಾವದಿಂದ ನಡೆಯುವವರಾದ್ದರಿಂದ ಅವರು ಲಿಂಗದ ವಿನಾ ಬೇರೊಂದು ದೈವಕ್ಕೆ ಎಂದೂ ಎರಗಲಾರರು. ಈ ವಿಷಯದಲ್ಲಿ ಬಸವಣ್ಣನವರು ಅಪ್ಪಣೆಕೊಡಿಸಿರುವದೇನಂದರೆ— "ದೇವನೊಬ್ಬ ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದೊಡೆ ಕಿವಿ ಮೂಗ ಕೊಯ್ಯುವನು. ಹಲವು ದೈವದ ಎಂಜಲ ತಿಂಬುವವರನೇನೆಂಬೆನಯ್ಯಾ ಕೂಡಲಸಂಗಮ ದೇವಾ." ಇದಲ್ಲದೆ "ನಂಬಿದ ಹೆಂಡತಿಗೆ ಗಂಡನೊಬ್ಬನೇ ಕಾಣಿರೋ. ನಂಬಬಲ್ಲ ಭಕ್ತಂಗೆ ದೇವನೊಬ್ಬನೇ ಕಾಣಿರೋ. ಬೇಡ ಬೇಡ. ಅನ್ಯದೈವದ ಸಂಗ ಹೊಲ್ಲ. ಅನ್ಯದೈವವೆಂಬುದು ಹಾದರ ಕಾಣಿರೋ. ಕೂಡಲ ಸಂಗಮ ದೇವರು ಕಂಡರೆ ಮೂಗ ಕೊಯ್ಯುವ ಕಾಣಿರೋ."

ಒಬ್ಬ ದೇವನಲ್ಲಿ ಶ್ರದ್ಧೆಯನ್ನಿಟ್ಟು ಆರಾಧಿಸಿದರೆ ಮನಸ್ಸಿನ ಏಕಾಗ್ರತೆಯು ಬಹು ತೀವ್ರವಾಗಿ ಆಳವಟ್ಟು ಸುಖ ಶಾಂತಿಯು ಲಭಿಸುವದು. ಅನೇಕ ದೈವಂಗಳಲ್ಲಿ ಶ್ರದ್ಧೆಯನ್ನಿಟ್ಟು ಆಚರಿಸುವವರಿಗೆ ಮನಸ್ಸಿನ ಏಕಾಗ್ರತೆಯು ದೊರಕುವದು ಕಷ್ಟ. ಸುಖ ಶಾಂತಿಯು ದೊರೆಯುವದೂ ಕಷ್ಟ. ಅನೇಕ ದೈವಂಗಳನ್ನು ನಂಬುವವರು "ಯಾವ ದೇವರು ಹೆಚ್ಚು? ಯಾವ ದೇವರು ಕಡಿಮೆ?" ಎಂಬ ತರ ತಮ ಭಾವಕ್ಕೆ ಸಿಲ್ಕಿ ಸಂಶಯಾತ್ಮರಾಗಿ ಅಧೋಗತಿಗಿಳಿಯುವರು. ಒಬ್ಬನೇ ದೇವರಲ್ಲಿ ಅರ್ಥಾತ್ ಇಷ್ಟಲಿಂಗದಲ್ಲಿ ಅಚಲವಾದ ಶ್ರದ್ಧೆಯನ್ನಿಟ್ಟವರು ಯಾವ ಸಂಶಯಕ್ಕೂ ಒಳಗಾಗದೆ ನಿಶ್ಚಲವಾದ ಅಮೃತ ಸುಖವನ್ನು ಸೇವಿಸುವರು.

ಶಿವನೇ ದೇವರೆಂದೂ ಶಿವನಲ್ಲದೆ ಅನ್ಯ ದೈವವಿಲ್ಲೆಂದೂ ವೀರಶೈವ ಮತವು ಸಾರುವದು. ಆ ಶಿವನೆಂದರಾರು? ಶಿವಶರಣರು ಸ್ಥಾವರಲಿಂಗಗಳನ್ನು ನಿಷೇಧಿಸಿದರೂ ಆ ಮುದ್ರಿಕೆಗಳನ್ನಿಟ್ಟುಕೊಂಡು ವಚನಗಳನ್ನು ರಚಿಸಿದುದೇಕೆ? ಎಂಬ ಪ್ರಶ್ನೆಯು ಹೊರಡುವದು. ಇದಕ್ಕೆ ಉತ್ತರ ವಿಷ್ಟೇ. ಶೈವರ ಶಿವನಿಗೂ ವೀರಶೈವರ ಶಿವನಿಗೂ ಮಹದಂತರವುಂಟು. ಶೈವರ ಶಿವನು ಪೌರಾಣಿಕನು. ಅವನಿಗೆ ಪಂಚಮುಖ, ದಶಭುಜ, ತ್ರಿನೇತ್ರಗಳುಂಟು. ಆತನು ಪಾರ್ವತೀ ಪತಿಯು. ಗಜಾನನ ಷಣ್ಮುಖರು ಆತನ ಮಕ್ಕಳು. ಆತನು ಧರೆಯಲ್ಲಿ ಪಂಚವಿಂಶತಿ ಲೀಲೆಗಳನ್ನು ತೋರಿಸಿದ್ದಾನೆ. ಇಂಥ ಶಿವನನ್ನು ವೀರಶೈವರು ಮನ್ನಿಸುವದಿಲ್ಲ. ವಿಶ್ವವ್ಯಾಪಿಯಾದ ಆ ಪರವಸ್ತುವಿಗೇ ಅವರು ಶಿವನೆಂದು ಕರೆಯುವರು. ಅವರ ಇಷ್ಟಲಿಂಗವೇ ಆ ಪರಶಿವನ ಕುರುಹು. ಅದರಂತೆ ಶರಣರ ಮುದ್ರಿಕೆಗಳಾದರೂ ಸ್ಥಾವರ ಲಿಂಗಗಳಾಗಿರದೆ ಕೇವಲ ಪರಶಿವನ ಸ್ವರೂಪಗಳೇ ಆಗಿರುತ್ತವೆ.

'ದೇವನೊಬ್ಬ ನಾಮ ಹಲವು' ಎಂದು ಹೇಳುವ ವೀರಶೈವರು ರಾಮ-ಹರಿ-ಕೃಷ್ಣ ಇತ್ಯಾದಿ ತಮಗಿಷ್ಟವಾದ ಹೆಸರುಗಳಿಂದ ಆ ಪರಮಾತ್ಮನನ್ನು ಕರೆದರೆ ಅಸಮಾಧಾನಬಡಬಹುದೇ ಹೇಗೆಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ಉತ್ತರವಿಷ್ಟೇ. ಪರಮಾತ್ಮನಿಗೆ ಹೆಸರಿಡುವದು ಅವರವರ ಇಷ್ಟವು. ಪರಮಾತ್ಮನನ್ನು ಬೇಕಾದ ಹೆಸರಿನಿಂದ ಕರೆದರೂ ವೀರಶೈವರಿಗೆ ಅಸಮಾಧಾನವಿಲ್ಲ. ಆದರೆ ಆಯಾಯ ಹೆಸರುಗಳುಳ್ಳ ವಿಗ್ರಹಗಳನ್ನು ಜನರು ಆರಾಧಿಸಿದರೆ ಅದಕ್ಕೆ ವೀರಶೈವ

ಮತದ ಒಪ್ಪಿಗೆಯಿಲ್ಲ. ಅನೇಕ ಶರಣರು ರಾಮನಾಥ, ನೃಸಿಂಹ ಪ್ರಿಯ, ಹರಿಹರ ಎಂಬ ಅಂಕಿತಗಳಿಂದ ಇಷ್ಟಲಿಂಗವನ್ನು ಆರಾಧಿಸಿದ್ದುಂಟು. ಶೈವ–ವೈಷ್ಣವ ನಾಮ ಭೇದವು ಶೈವರಿಗೆ ತೋರುವಂತೆ ವೀರಶೈವರಿಗೆ ತೋರುವದಿಲ್ಲ. ತಮಗೆ ಇಷ್ಟವಾದ ಹೆಸರಿನಿಂದ ಪರಮಾತ್ಮನನ್ನು ಕರೆದು ಪೂಜಿಸಬೇಕೆಂದೇ ನಮ್ಮವರು ಇಷ್ಟಲಿಂಗವೆಂದು ಪರಮಾತ್ಮನ ಕುರುಹನ್ನು ತೋರಿಸಿದ್ದಾರೆ. ಇಷ್ಟಲಿಂಗಕ್ಕೆ ನಾಮ ಭಿನ್ನತೆಯಿರಬಹುದು. ಆದರೆ ಅದಕ್ಕೆ ರೂಪ–ಗುಣ–ಶಕ್ತಿಗಳ ಭಿನ್ನತೆಯಿಲ್ಲ.

ವೀರಶೈವರು ಸ್ಥಾವರ ಲಿಂಗ ಪೂಜಕರಾಗಿರದಿದ್ದರೆ ಅನೇಕ ಶೈವ ಗುಡಿಗಳ ಪೂಜಾರಿಗಳು ವೀರಶೈವರಿರುವುದೇಕೆ? ಎಂಬ ಬೇರೊಂದು ಪ್ರಶ್ನೆ ಹೊರಡುವದು. ಅದಕ್ಕೆ ಉತ್ತರವಿಷ್ಟೇ. ಆ ಪೂಜಾರಿಗಳಿಗೆ ಇಷ್ಟಲಿಂಗವಿದೆಯೋ ಇಲ್ಲವೋ? ಇದ್ದರೆ ಅದೇ ಅವರನ್ನು ಉದ್ಧಾರ ಮಾಡುವ ಪರವಸ್ತುವು. ಆದರೆ ಸ್ಥಾವರ ಲಿಂಗ ಪೂಜೆಯು ಹೊಟ್ಟೆಯ ಪಾಡಿಗಾಗಿ ಕೈಕೊಂಡ ಒಂದು ಕಾಯಕವು ಮಾತ್ರ. ಹಿಂದಿನ ಶೈವ ಅರಸರು ಯೋಗ್ಯ ಜನರಿಂದ ದೇವರ ಪೂಜೆಯು ಸಾಗಲೆಂದು ವೀರಶೈವ ಪೂಜಾರಿಗಳನ್ನು ನೇಮಿಸಿ ಭೂಮಿ ಸೀಮೆಗಳನ್ನು ಅವರಿಗೆ ಹಾಕಿ ಕೊಟ್ಟಿದ್ದರಿಂದ ಅವರ ವಂಶಿಕರು ಆ ಕಾಯಕಗಳನ್ನು ಮಾಡುತ್ತಾ ಬಂದಿದ್ದಾರೆ. ಆದರೆ ಸ್ಥಾವರ ಲಿಂಗವು ತಮಗೆ ಪರಸುಖವನ್ನೀಯುವ ಪರವಸ್ತುವೆಂದಲ್ಲ. ಹಾಗಿದ್ದರೆ "ಕಲ್ಲ ದೇವರ ಮಾಡಿ ಕಲ್ಲ ಮನೆಯ ಮಾಡಿ ಆ ಕಲ್ಲ ಕಲ್ಲ ಮೇಲೆ ಕೆಡೆದರೆ ದೇವರೆತ್ತ ಹೋದರೋ? ಲಿಂಗ ಪ್ರತಿಷ್ಠೆಯ ಮಾಡುವವರಿಗೆ ನಾಯಕ ನರಕ ತಪ್ಪದು ಗುಹೇಶ್ವರಾ" ಎಂದು ಪ್ರಭುದೇವರು ಅಪ್ಪಣೆಕೊಡಿಸುತ್ತಿರಲಿಲ್ಲ.

ವೀರಶೈವರಿಗೆ ದೇವನೊಬ್ಬನೇ ಆಗಿದ್ದರೂ ಕ್ರಿಯಾ ಭೇದದಿಂದ ಆ ಪರವಸ್ತುವನ್ನು ಗುರು–ಲಿಂಗ–ಜಂಗಮವೆಂದು ತ್ರಿವಿಧವಾಗಿ ವಿಂಗಡಿಸಿರುವರು. ಅದರಿಂದ ಗುರು ಲಿಂಗ ಜಂಗಮರಲ್ಲಿ ತರ ತಮ ಭಾವವನ್ನೆಣಿಸಲಿಕ್ಕೆ ಬರುವದಿಲ್ಲ. ಗುರುವಿನಿಂದಲೇ ಲಿಂಗದ ಅರಿವಾಗುವದು. ಲಿಂಗಾನುಸಂಧಾನದಿಂದಲೇ ಜ್ಞಾನೋದಯವಾಗುವದು ಆ ಜ್ಞಾನವೇ ಮೋಕ್ಷ ಸಾಧನವು. ಆದುದರಿಂದ ಗುರು ಲಿಂಗ ಜಂಗಮಗಳು ಪರತರ ಮೋಕ್ಷಕ್ಕೆ ಕಾರಣವಾಗಿರುವದರಿಂದ ಅವೆಲ್ಲವೂ ಪರಶಿವನ ಸ್ವರೂಪ

ಗಳಿಂದೇ ವೀರಶೈವರು ಭಾವಿಸುವರು. ವೀರಶೈವ ಮತವು ಶೈವ ಧರ್ಮದಿಂದಲೇ ಉತ್ಕ್ರಾಂತಿ ಹೊಂದಿದ್ದರಿಂದ ಶಿವನೇ ಪರದೈವವೆಂದು ಅವರು ಭಾವಿಸಬೇಕಾಯಿತು. ದೇವರಿಗೆ ಮತ್ತೊಂದು ಹೆಸರನ್ನಿಡಲಿಕ್ಕೆ ಅವರು ಹೋಗಲಿಲ್ಲ. ಅದರಂತೆ ಹರಗುರುಚರಮೂರ್ತಿಗಳನ್ನೂ ಒಂದೇ ಭಾವದಿಂದ ಕಾಣುವ ಸಾಂಪ್ರದಾಯವೂ ಬಳಿಕೆಯಲ್ಲಿ ಬಂದಿತು. ಆದರೆ ಗುರು ಹೆಚ್ಚು ಜಂಗಮ ಕಡಿಮೆ ಅಥವಾ ಜಂಗಮ ಹೆಚ್ಚು ಗುರು ಕಡಿಮೆಯೆಂದು ಕೋಲಾಹಲವನ್ನೆಬ್ಬಿಸುವವರು ಧರ್ಮದ್ರೋಹಿಗಳು. ಅವರಿಗೆ ಧರ್ಮದ ಅರಿವೇ ಇಲ್ಲ. ಗುರುವು ಹೆಚ್ಚಲ್ಲ ಜಂಗಮ ಕಡಿಮೆಯಲ್ಲ. ಎರಡೂ ಒಂದೇ ಎಂದು ವೀರಶೈವ ಮತವು ಸಾರುತ್ತದೆ. ಒಂದೇ ಪರತರ ಲಿಂಗದ ಭಿನ್ನ ರೂಪಗಳೇ ಗುರು ಜಂಗಮಗಳು.

ಅನ್ಯ ದೇವರುಗಳನ್ನು ನಿರಾಕರಿಸಿ ಇಷ್ಟಲಿಂಗವನ್ನೇ ಪೂಜಿಸಿ, ಧ್ಯಾನಿಸಿ ಅದರಲ್ಲಿಯೇ ಮನಮಗ್ನವಾಗುವ ವೀರಶೈವರಿಗೆ ವೀರವ್ರತಿಗಳೆನ್ನುವರು. ವೀರರಾದವರೇ ಇಂಥ ವ್ರತಗಳನ್ನು ಪಾಲಿಸಲು ಸಮರ್ಥರಲ್ಲದೆ ನೂರೆಂಟು ದೈವಗಳನ್ನು ನಂಬುವ ಹೇಡಿಗಳೂ ಸಂಶಯಾತ್ಮರೂ ಸಾಮರ್ಥ್ಯರಲ್ಲ. ಆದುದರಿಂದ ವೀರಶೈವರೆಲ್ಲ ವೀರವ್ರತಿಗಳಾಗಬೇಕೆಂದೇ ೧೧ ನೆಯ ಆಚಾರವು ಸಾರುತ್ತದೆ.

---

## ಋಣ.

### (ಕಟ್ಟಿಯ ಬಸವೇಶ್ವರ.)

ಋಣ ಋಣ ಋಣವೆಂದು ಬರಿದೆ ಗೊಣಗುವಿರಿ! ಋಣದ ಪ್ರಾಪ್ತಿಯನರಿಯಿರಿ! ಋಣದ ಮುಕ್ತಿಯ ಕಾಣಿರಿ! ಕೇಳಿರಯ್ಯಾ! ಗುರುವಿನಿಂದ ತನುವ ಪಡೆದು, ಗುರು ಋಣ ಪ್ರಾಪ್ತಿಯಾಯಿತ್ತು. ಲಿಂಗದಿಂದ ಮನವ ಪಡೆದು, ಲಿಂಗ ಋಣ ಪ್ರಾಪ್ತಿಯಾಯಿತ್ತು. ಜಂಗಮದಿಂದ ಧನವ ಪಡೆದು, ಜಂಗಮ ಋಣ ಪ್ರಾಪ್ತಿಯಾಯಿತ್ತು. ಇದು ಕಾರಣ ತನುವ ಗುರುವಿಂಗೆ ಕೊಟ್ಟು, ಮನವ ಲಿಂಗಕ್ಕೆ ಕೊಟ್ಟು, ಧನವ ಜಂಗಮಕ್ಕೆ ಕೊಟ್ಟು, ಋಣ ಮುಕ್ತರಾಗಿರಯ್ಯಾ! ಬಸವಲಿಂಗ ಪ್ರಿಯ ಕಟ್ಟಿಯ ಬಸವೇಶ್ವರನು ಋಣ ಭಾರಿಗಳನೊಲ್ಲ.

---

# ಕನ್ನಡ ಭಕ್ತಿದೀಪಕ--ಬಸವಣ್ಣ.

## (೫) ಬಸವಣ್ಣನು ಹಾಯ್ದ ಹೆಜ್ಜೆ.

( ಲೇಖಕ:— ಸಿಂಪಿ ಲಿಂಗಣ್ಣ )

---

### ಬಾಳಿಗೆ ದೀಪ

ಬಸವಣ್ಣನೆಂಬ ಹಿಮನದಿಯು ಉಗಮಿಸಿದ್ದು ಬಾಗೇವಾಡಿಯ ಧವಳಗಿರಿಯಲ್ಲಿ. ಉಗಮಿಸಿದ ನದಿಯು ಮುಖ್ಯ ನದಿಯಾಗಿ ಸಮುದ್ರ ನಾಥನನ್ನು ಸೇರಬೇಕು; ಇಲ್ಲವೆ ಶಾಖಾನದಿಯಾಗಿ ಬೇರೊಂದು ನದಿಯನ್ನು ಬೆರೆತುಕೊಳ್ಳಬೇಕು. ಇವೆರಡು ಜೀವನ ರೀತಿಗಳು. ನಮ್ಮ ಹಿಮನದಿಯು ಮುಖ್ಯ ನದಿಯಾಗಿ, ಅನೇಕ ನದಿಗಳ ಸಂಗಡಿಗವಾಗಿ ಸಂಗಮ ಸಾಗರವನ್ನು ಸೇರಿಕೊಂಡಿತು. ಉನ್ನತವಾದ ಬೆಟ್ಟಕಾಡನ್ನು ಸಾವಕಾಶವಾಗಿ ದಾಟಿದ ಹಿಮನದಿಯು ಬಯಲುನಾಡನ್ನು ಪ್ರವೇಶಿಸಿ ತಿಳಿಗಂಗೆಯಾಗಿ, ಅಗಲವಾಗಿ, ಬಹುಜನೋಪಕಾರಿಯಾಗಿ ಹರಿಯಿತು; ಮುಂದೆ ತನ್ನಂಥವೇ ಆದ ಅದ್ಭುತ ನದಿಗಳನ್ನು ಅಳವಡಿಸಿಕೊಂಡು ಇನ್ನಿಷ್ಟು ವಿಶಾಲವಾಗಿ, ಇನ್ನಿಷ್ಟು ಆಳವಾಗಿ ಕಡಲರಾಜನ ರಾಣಿಯಾಗಿ ರಾಜಿಸಿತು. ಬಸವಣ್ಣನ ಹುಟ್ಟು ಶ್ರೇಷ್ಠವಾದ ಒಂದು ಬ್ರಾಹ್ಮಣ ಕುಟುಂಬದಲ್ಲಿ; ಆದರೂ ಚಂಚಲವಾದ ಪ್ರವಾಹದಂತೆ ಗಡಬಡಿಸಿ ಅಲ್ಲಿಂದ ಇಳಿದು ಬಂತು. "ಬಡ ಹಾರುವನೇಸು ಭಕ್ತನಾದರೆಯೂ ನೇಣಿನ ಹಂಗ ಬೀಡ. ಮಾಲೆಗಾರನೇಸು ಭಕ್ತನಾದರೆಯೂ ಬಾವಿಯ ಬೊಮ್ಮನ ಹಂಗ ಬಿಡ. ಬಣಜಿಗನೇಸು ಭಕ್ತನಾದರೆಯೂ ಒಟ್ಟಿಲ ಬೆನಕನ ಹಂಗ ಬಿಡ" ಎಂದು ಹೀಗಳಿದು ಮುಂದುವರಿದನು. ಮುಂದುವರಿದನು ಸರಿ. ಆದರೆ ಎತ್ತ ? "ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು. ಇನ್ನೆಂದಿಗೆ ಮೋಕ್ಷವಹುದೋ ?" ಎಂದು ಚಿಂತಿಸಿ ಬಾಳಿಗೊಂದು ಬೆಳಕನ್ನು ಗಳಿಸಲು ಹಾತೊರೆದನು; ಚಿಕ್ಕ ಜೀವಕ್ಕೆ ಪುಟ್ಟ ಸಂಸಾರಿಗೆ ಒಂದು ಹಣತಿ ಸಾಕು; ಅಂಥವನ ಮನೆಗೆ ಸೊಡರಿನ ಬೆಳಕು ಸಾಕು. ಆದರೆ, ವಿಶಾಲ ಜೀವಕ್ಕೆ---ಮಹಾಸಂಸಾರಿಗೆ ಮಹಾಜ್ಯೋತಿ---ದಿವ್ಯ ಜ್ಯೋತಿ ಬೇಕಾಗುತ್ತದೆ.

“ ವಿಶ್ವಜಿತನು, ದನುಜಜಿತನು, ಸರ್ವಜಿತನು, ಸುತ್ರಾಮಜಿತನು, ನೃಜಿತನು, ಊರ್ವಜಿತನು, ಅಚ್ಯುತಜಿತನು, ಸುಸಂವೇದ್ಯನು, ವೇದ ನಾದಾತೀತನು, ತುರೀಯ ಪರಮಾನಂದ ನಿರವಯ ಕೋಟಿ ಸೂರ್ಯ ಪ್ರಭೆಯ ಬೆಳಗಿನ ಸಹಸ್ರಕಿರಣದ ಅಗ್ರಪಟಲದ ಬೆಳಗು ಕೂಡಲ ಸಂಗಯ್ಯ”ನೇ ಬಸವಣ್ಣನ ಬಾಳಿಗೆ ಬೆಳಕು. ಆದರೆ ಆತನೆಲ್ಲಿ ? ಅದನ್ನು ಬಸವಣ್ಣನ ಬಾಯಿಂದಲೇ ಆಲಿಸುವಾ.

“ ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ. ಸಕಳ ವಿಸ್ತಾರದ ರೂಹು ನೀನೇ ದೇವಾ. ವಿಶ್ವತೋ ಬಾಹು ನೀನೇ ದೇವಾ. ವಿಶ್ವತೋ ಚಕ್ಷು ನೀನೇ ದೇವಾ. ವಿಶ್ವತೋ ಮುಖ ನೀನೇ ದೇವಾ. ವಿಶ್ವತೋ ಬಾಹು ನೀನೇ ದೇವಾ ಕೂಡಲ ಸಂಗಮದೇವಾ. ”

ನಮಗೆ ಸಕಳ ವಿಸ್ತಾರ ಕಾಣಿಸಿದರೂ ಅದರ ರೂಹು ಗೋಚರಿಸದು. ಆದರೆ ಬಸವಣ್ಣನ ಅಂತರ್ ದೃಷ್ಟಿಗೆ ಅದು ಕಂಗೊಳಿಸಿದೆ. ಅವನ ಮನಕ್ಕೆ ಬಂದ ಸಕಳ ವಿಸ್ತಾರದ ರೂಹು ಎಂಥದೆಂದರೆ

“ ಹೊನ್ನಹಾವುಗೆಯ ಮೆಟ್ಟಿದವನ, ಮಿಡಿಯ ಮುಟ್ಟದ ಕೆಂಜಡೆಯವನ, ಮೈಯಲ್ಲಿ ವಿಭೂತಿ ಧರಿಸಿದವನ, ಕರದಲ್ಲಿ ಕಪಾಲವ ಪಿಡಿದವನ, ಅರ್ಧನಾರಿಯಾದವನ, ಸದ್ಭಕ್ತರ ಹೃದಯದಲ್ಲಿಪ್ಪವನ ಎನ್ನ ಮನಕ್ಕೆ ಬಂದವನ, ಮಾಡಿದ ಪೂಜೆಯಲೊಪ್ಪುವನ ” ರೂಹು.

ಮೂವತ್ತು ಮೂರುಕೋಟಿ ದೇವತೆಗಳನ್ನು ದಾಟಿ, ತ್ರಿಮೂರ್ತಿಗಳಲ್ಲೊಬ್ಬನಾದ ಕೂಡಲಸಂಗನನ್ನೇ ವರಿಸಿದ್ದೇಕೆ ? ಅರಗು ತಿಂದು ಕರಗುವ ದೈವವೂ ಉರಿಯ ಕಂಡರೆ ಮುರಟುವ ದೈವವೂ, ಅವಸರ ಬಂದರೆ ಮಾರುವ ದೈವವೂ ಅಂಜಿಕೆ ಬಂದರೆ ಹೂಳುವ ದೈವವೂ ಅವನಿಗ ಬೇಕಿಲ್ಲವಾಗಿತ್ತು. “ ಆವಾಗಲೂ ಲೋಗರ ಮನೆಯ ಕಾಯ್ದು ಕೊಂಡಿಪ್ಪ ” ನಾಯ ದೈವಗಳನ್ನು ತ್ಯಜಿಸಿದನು. “ ವಿಷ್ಣುವ ಪೂಜಿಸಿ ಮುಡುಹ ಸುಡಿಸಿಕೊಂಬುದೂ, ಜಿನನ ಪೂಜಿಸಿ ಬತ್ತಲೆ ಇಪ್ಪುದೂ, ಮೈಲಾರನ ಪೂಜಿಸಿ ನಾಯಾಗಿ ಬೊಗಳುವುದೂ ” ಅಸಹ್ಯವೆನಿಸಿ, ಸಹಜ ಭಾವನಿಜೈಕ್ಯ ಕೂಡಲ ಸಂಗಮದೇವನೊಬ್ಬನೇ ದೇವ”ನೆಂದು ಅವನನ್ನು ಆದರಿಸಿದನು. ಬಸವಣ್ಣನದೇ ರಾಜಮಾರ್ಗವಲ್ಲ; ಅದೇ ಪೂರ್ಣಸತ್ಯವಲ್ಲ; ಬಸವಣ್ಣನ ಪ್ರಕೃತಿ ಸ್ವಭಾವವು ಕೂಡಲ ಸಂಗ

ನನ್ನು ಒಲಿದರೆ, ಬೇರೊಬ್ಬ ಭಕ್ತನ ಪ್ರಕೃತಿ ಸ್ವಭಾವವು ವಿಷ್ಣುವನ್ನೋ ಜಿನನನ್ನೋ ಒಲಿಯಲು ಸ್ವತಂತ್ರವಾಗಿದೆಯೆಂಬುದನ್ನು ಮರೆತರಾಗದು. ಒಟ್ಟು ಯಾವ ಜೀವನವೇ ಆಗಲಿ, ಅದು "ಏದು ಮಾನವ ಕುಟ್ಟಿ ಒಂದು ಮಾನವ ಮಾಡು"ವ ಹೋರಾಟ; "ಮದವಳಿದು ನಿಜವುಳಿದರೆ ಬಳಿಕದು ಸತ್ಯ"ವಷ್ಟೇ? ಆ ಸತ್ಯವು ದೇವನೊಲಿದ ಜಾತಿಯವಂಗೆ ಕಟ್ಟಿಟ್ಟುದೆ; ಯಾವ ದೇವನೊಲಿದರೂ ಅಷ್ಟೇ. "ಊರಿಂಗೆ ದಾರಿಯನು ಯಾರು ತೋರಿದರೇನು ?"

## ಭಕ್ತಿಯ ರಾಜಮಾರ್ಗ.

ತನ್ನ ಬಾಳಿಗೊಂದು ದೀಪವನ್ನು ಗೊತ್ತುಪಡಿಸಿದ ಮೇಲೆ ಅದನ್ನು ತಲಪುವ ದಾರಿಯನ್ನು ನಿಶ್ಚಯಿಸಬೇಕಾದುದು ಮುಂದಿನ ಕೆಲಸ. ಬಸವಣ್ಣನಿಗೆ ತ್ರಿಮಾರ್ಗಗಳಲ್ಲೊಂದಾದ ಭಕ್ತಿಯೇ ರಾಜಮಾರ್ಗವಾಗಿ ತೋರಿತು; ಅದೇ ತನಗೆ ಒಗ್ಗುವಂಥದೆಂದು ಮನವರಿಕೆಯಾಯ್ತು. ಭಕ್ತಿಯಲ್ಲಿ ಅವನು ಭಾಂಡಾರಿ. ಜ್ಞಾನಕರ್ಮಗಳು ಆ ಭಕ್ತಿಗೆ ಹಿನ್ನೆಲೆಯಾಗಿ ಅದನ್ನು ಪುಟಗೊಡುವವು; ಕಪ್ಪಡಿಯಲ್ಲಿ ಗಳಿಸಿದ ಶಾಸ್ತ್ರಭ್ಯಾಸವೂ, ಕಲ್ಯಾಣದಲ್ಲಿ ಬಳಸಿದ ಮಂತ್ರಿಪದ ಕಾಯಕವೂ ಆತನ ಜ್ಞಾನ ಕರ್ಮಗಳು. ತನುವಿನ ಹೇಳಿಗೆಯಲ್ಲಿದ್ದ ಮನವೆಂಬ ಸರ್ಪದಂಶವಾಗದಿರಬೇಕಾದರೆ, —"ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲಡೆ ಅದೇ ಗಾರುಡ" ಎಂದು ಭಕ್ತಿಯನ್ನು ಆದರಿಸಿದನು. "ಸರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲಹುತ್ತ ಶಿವಶಿವ ಎಂದೋದಿಸಿ"ದರೆ ಸಾಕೆನ್ನುವ ಆರಂಭದ ಪಾಠವು ಮುಂದುವರಿದು, "ಅಷ್ಟವಿಧಾರ್ಚನೆ ಷೋಡಶೋಪಚಾರ" ಮಾಡುವುದಕ್ಕೂ, ಶಿವತತ್ವ ಪಾಡಿ ಶಿವನ ಮುಂದೆ ನಲಿದಾಡುವುದಕ್ಕೂ ಬಂದಿತು. "ಭಕ್ತಿಯೆಂಬ ನಿಧಾನವ ಸಾಧಿಸಲು ಶಿವಪ್ರೇಮವೆಂಬ ಅಂಜನ"ದ ಅವಶ್ಯಕತೆ ಕಂಡು ಬಂದಿತು. ಆ ಅಂಜನವನ್ನು ಹೇಗೆ ದೊರಕಿಸಬೇಕು? "ಸುರರ ಬೇಡಿದರಿಲ್ಲ, ನರರ ಬೇಡಿದರಿಲ್ಲ; ಕೂಡಲ ಸಂಗಮದೇವನಲ್ಲದೆ ಆರ ಬೇಡಿದರಿಲ್ಲ." ಆದ್ದರಿಂದ "ಚಂದ್ರಮನ ಬೆಳಗಿನ ಚಿಂತೆ ಚಕೋರನಿಗೆ, ಭಾನುವಿನ ಉದಯದ ಚಿಂತೆ ಅಂಬುಜಕ್ಕೆ, ಪರಿಮಳದ ಬಂಡುಂಬ ಚಿಂತೆ ಭ್ರಮರಕ್ಕೆ ಇರುವ ಹಾಗೆ, ಕೂಡಲ ಸಂಗಮದೇವನನ್ನು ನೆನೆಯುವುದೇ ಒಂದು ಚಿಂತೆಯಾಗಿ ಬಿಟ್ಟಿತು ಬಸವಣ್ಣನಿಗೆ. ಆ ಚಿಂತೆ ಮುಪ್ಪು ತರುವ ಚಿಂತೆಯಲ್ಲ;

ಅದು ಚಿರಂತನ ಚಿಂತೆ. ಆ ಚಿಂತೆಯು ವಿಷವನ್ನು ನುಂಗಿದ ನಂಜುಂಡನು ಆಡಿದರೆ ಕಾಲುದಣಿಯುವು; ನೋಡಿದರೆ ಕಣ್ಣು ದಣಿಯುವು; ಹಾಡಿದರೆ ನಾಲಗೆ ದಣಿಯದು. ಆ ಚಿಂತೆ ಅಜರಾಮರವಾಗಿಸುವ ಮಹಾ ನೆನಹು. ಆ ನೆನಹಿನ ಅನುಭವವನ್ನು ಬಸವಣ್ಣನು ಹಾಡಿಕೊಂಡಿದ್ದು ಹೇಗೆಂದರೆ—

"ಎನಗೆ ನಿಮ್ಮ ನೆನಹಾದಾಗಲೇ ಉದಯ, ಎನಗೆ ನಿಮ್ಮ ಮರಹಾದಾಗಲೆ ಅಸ್ತಮಾನ. ಎನಗೆ ನಿಮ್ಮ ನೆನಹವೇ ಜೀವ. ಎನಗೆ ನಿಮ್ಮ ನೆನಹವೇ ಪ್ರಾಣ."

ಇಷ್ಟೇ ಸಾಲದೆ, "ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯನೊತ್ತಯ್ಯ." ಎಂದು ಹಾರಯಿಸಿದ್ದಾನೆ. ಎದೆ ಬಿರಿವಂತೆ, ಮನ ದಣಿವಂತೆ, ನಾಲಗೆ ನಲಿನಲಿವಾಡುವಂತೆ ನಾಮಾಮೃತವನ್ನು ತಂದಿರಿಸಿದರೆ, ಬಿರಿಮುಗುಳಂತೆ ಹೃದಯವು ಶ್ರೀಚರಣದ ಮೇಲೆ ಬಿದ್ದು ಉರುಳಲಾರವೇ?

"ಅಂಗಯ್ಯೊಳಗಣ ಲಿಂಗವ ನೋಡುತ್ತ, ಕಂಗಳು ಕಡೆಗೋಡಿ ವರಿಯುತ್ತ ಸುರಿವುತ್ತ ಎಂದಿಪ್ಪೆನೋ? ನೋಟವೇ ಪ್ರಾಣವಾಗಿ ಎಂದಿಪ್ಪೆನೋ? ಕೂಟವೇ ಪ್ರಾಣವಾಗಿ ಎಂದಿಪ್ಪೆನೋ?"

ಎಂದು ತವಕಿಸುತ್ತ—

"ಮನಮನ ಬೆರೆಸಿದಲ್ಲಿ ತನು ಕರಗದಿದ್ದರೆ, ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿದ್ದರೆ, ಕಂಡಾಗಳಶ್ರುಜಲಂಗಳು ಸುರಿಯದಿದ್ದರೆ, ನುಡಿವಲ್ಲಿ ಗದ್ಗದಂಗಳು ಪೊಣ್ಮದಿದ್ದರೆ ಅದು ಭಕ್ತಿಯೇ? ಭಕ್ತಿಗದು ಚಿಹ್ನ. ಎನ್ನಲ್ಲಿ ಇಲ್ಲವಾಗಿ ಆನು ಡಾಂಭಿಕ ಕಾಣಿರೇ"

ಎಂದು ಸಾಶಂಕನಾಗಿ ಸಾಧನೆಯನ್ನು ಮುಂದುವರಿಸಿ, ಪ್ರಾರ್ಥಿಸಿ, ಯಾಚಿಸಿ—

"ಅಡಿಗಡಿಗೆ ಲಿಂಗವನಡರಿಯಡರಿ ನೋಡಿ ನೋಡಿ ಕಂಗಳು ಕಡೆಗೋಡಿವರೆದುವಯ್ಯ. ಎನ್ನಶ್ರುಜಲಂಗಳು ಆಲಿಕಲ್ಲ ರೂಹಿನಂತೆ, ಅರಗಿನ ಪುತ್ಥಳಿಯಂತೆ, ತನು ಪುಳುಕಿತವಾದ ಬೆಮರ ಬಿಂದುಗಳೆಲ್ಲ. ಕೂಡಲಸಂಗನ ದರ್ಶನಸ್ಪರ್ಶನದಿಂದ ಮನ ಒಲಿದು ನೆರೆವ ಭರವನೇನ ಹೇಳುವೆನಯ್ಯ?

"ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ

ನಿಮ್ಮ ಕೀರ್ತಿ ತುಂಬಿ ಕೂಡಲಸಂಗಮದೇವ, ನಿಮ್ಮ ಚರಣಕಮಲ ದೊಳಾನು ತುಂಬಿ. "

ಕೊನೆಗೆ ಭಕ್ತಿಯಿಂದ ತುಂಬಿದ ಬಸವಣ್ಣನು ತಾನು ಸಂಗನ ಚರಣಾರವಿಂದದ ತುಂಬಿಯಾದುದು ನಿಶ್ಚಯವೆಂದು ವಿಶ್ವಾಸದಿಂದ ತುಂಬಿ ಹೋದನು.

## ನಿಲ್ಲು ಮೆಟ್ಟಿಲುಗಳು.

ಬಸವಣ್ಣನ ಕಾಲದ ಶರಣರು ಯಾವ ಮಾರ್ಗದಿಂದ ಹೊರಟರೂ ಅವರಿಗೆ ಷಟ್‌ಸ್ಥಲಗಳೇ ನಿಲ್ಲ ಮೆಟ್ಟಿಲುಗಳೆಂದು ಹೇಳುತ್ತಾರೆ. ಆದರೆ ಅವಾವವೂ ನಮಗೆ ಸ್ಪಷ್ಟ ತಿಳಿಯದು. ಭಕ್ತನ ಅಥವಾ ಸಾಧಕನ ಬಾಹ್ಯಾಂತರ-ಲಕ್ಷಣಗಳ ಮೇಲಿಂದ ಇದು ಇಂಥ ಸ್ಥಲವೇ ಎಂದು ನಿಶ್ಚಯಿಸುತ್ತಾರೆ. ಆ ಮಾತನ್ನು ಬಸವಣ್ಣನೂ ಒಂದು ಕಡೆ ವಿವರಿಸಿದ್ದಾನೆ.—

" ಭಕ್ತನೆಂತೆಂಬೆನಯ್ಯ ಭವಿಸಂಗ ಬಿಡದನ್ನಕ್ಕ? ಮಹೇಶ್ವರನೆಂತೆಂಬೆನಯ್ಯ ಪರಸ್ತ್ರೀ ಪರಧನದಾಸೆ ಬಿಡದನ್ನಕ್ಕ ? ಪ್ರಸಾದಿಯೆಂತೆಂಬೆನಯ್ಯ ಆದಿವ್ಯಾಧಿ ನಷ್ಟವಾಗದನ್ನಕ್ಕ ? ಪ್ರಾಣಲಿಂಗಿ ಎಂತೆಂಬೆನಯ್ಯ ಪ್ರಾಣ ಸ್ಥಿರವಾಗದನ್ನಕ್ಕ ? ಶರಣನೆಂತೆಂಬೆನಯ್ಯ ಪಂಚೇಂದ್ರಿಯ ನಷ್ಟವಾಗದನ್ನಕ್ಕ ? ಐಕ್ಯನೆಂತೆಂಬೆನಯ್ಯ ಜನನಮರಣವಿರಹಿತವಾಗವನ್ನಕ್ಕ ? "

ಬಸವಣ್ಣನು ಭಕ್ತ; ಅವನದು ಭಕ್ತಿಮಾರ್ಗ. ತ್ರಿಮಾರ್ಗಗಳಲ್ಲಿ ಅದು ಉಳಿದವುಗಳಿಗಿಂತ ಸುಲಭವೆಂದು ಹೇಳುತ್ತಾರೆ. ಆದರೆ ಆ ಮಾರ್ಗದಲ್ಲಿದ್ದವರಿಗೆ ಅದು ಸಹ ಅತ್ಯಂತ ಬಿಕ್ಕಟ್ಟಿನದೆಂದು ತೋರುತ್ತಿರುತ್ತದೆ; ಅದು ಬಸವಣ್ಣನಿಗೆ ತಿಳಿದಿತ್ತು. ಅವನು ಹಿಂದಿನ ಭಕ್ತರ ಚರಿತ್ರಗಳನ್ನು ಅವಲೋಕಿಸಿದನು; ಮನನಮಾಡಿದನು. ಅವರು " ಇರಿಸಿಕೊಂಡು ಭಕ್ತರಾದರು; ತರಿಸಿಕೊಂಡು ಭಕ್ತರಾದರು; ಕೊರಿಸಿಕೊಂಡು ಭಕ್ತರಾದರು. " ಎಂಬ ಮಾತಿನಲಿ ಸಂದೇಹವೆ ಇರಲಿಲ್ಲ. ಆದರೆ ಭಕ್ತಿಯ ಸಂದುಕಟ್ಟಿನಲ್ಲಿ ಸಿಕ್ಕು ಬಿದ್ದ ಬಸವಣ್ಣನು ಹೀಗೆ ಅಂದುಕೊಳ್ಳುತ್ತಿದ್ದನು.

" ಭಕ್ತಿಯೆಂಬುದ ಮಾಡಬಾರದು. ಕರಗಸದಂತೆ ಹೋಗುತ್ತ ಕೊಯ್ವುದು. ಬರುತ್ತ ಕೊಯ್ವುದು. ಘಟಸರ್ಪನಲ್ಲಿ ಕೈದುಡುಕಿದರೆ ಹಿಡಿವುದು ಮಾಬುದೇ ? "

ದೇವದೇವನು ಜಗತ್ತಿಗೆ ಕರುಣಾಪರನಾಗಿದ್ದರೂ ಭಕ್ತನ ಪಾಲಿಗೆ ಕಠೋರ ಹೃದಯನೇ ಸರಿ; ಆತನು ಭಕ್ತನಿಗೆ ತರಕಟ ಕಾಡುವವನು; ಅಳಿಸುವ ನಗಿಸುವವನು; ಆದ್ದರಿಂದ ದೇವನು ಒಳ್ಳಿದನೇ? ಆದರೆ ಭಕ್ತರಕ್ಷಕ, ಭಕ್ತವತ್ಸಲ ಎಂಬ ಬಿರುದುಗಳು ಜೊಳ್ಳು ನುಡಿಗಳಲ್ಲ. ಸಣ್ಣನಹನ್ನಕ್ಕ ಅರೆದರೂ, ಬಣ್ಣಗಾಬನ್ನಕ್ಕ ಒರೆದರೂ ಕಡೆಗೆ ದೇವ ನೊಲಿದು ಸಲಹುವನು. ಯಾವಾಗ? ಅರೆದರೆ ಸಣ್ಣನಾಗಬೇಕು; ಒರೆದರೆ ಬಣ್ಣನಾಗಬೇಕು. ಅಲ್ಲಿಯು ವರೆಗೆ ಮಹಾ-ಧೈರ್ಯಬೇಕು; ಅತಿ ತಾಳ್ಮೆಬೇಕು. ಅದು ಬಸವಣ್ಣನಲ್ಲಿ ತುಂಬಾ ಇತ್ತು.

"ಎನಿಸೆನಿಸೆಂದರೂ ನಾ ಧೃತಿಗೆಡೆನಯ್ಯ. ಎಲುದೋರಿ ನರ ಹರಿ ದರೆ, ಕರುಳು ಕುಪ್ಪಳಿಸಿದರೆ ನಾ ಧೃತಿಗೆಡೆನಯ್ಯ. ಶಿರಹರಿದು ಅಟ್ಟೆ ನೆಲಕ್ಕೆ ಬಿದ್ದರೆ ನಾಲಗೆ ಕೂಡಲಸಂಗ ಶರಣೆನ್ನುತ್ತಿದ್ದಿತಯ್ಯ.

"ಒಣಗಿಸಿ ಗಣಗಣನೆ ಮಾಡಿದರೆಯೂ ಹರಣವುಳ್ಳನ್ನಕ್ಕ ನಿಮ್ಮ ಚರಣವ ನೆನೆವುದ ಮಾಣೆ; ಶರಣೆಂಬುದ ಮಾಣೆ ಮಾಣೆ. ಎನ್ನ ಹೆಣನ ಮೇಲೆ ಕುಂಚಿಟ್ಟುಂತಡೆಯೂ ಮಾಣೆ ಮಾಣೆ"

ಹೀಗೆ ಧೈರ್ಯವು ಎದೆಯಲ್ಲಿ, ನಿಷ್ಠೆ ಮನಸಿನಲ್ಲಿ, ಉಳ್ಳವಗೆ ಕಾಲಕರ್ಮಗಳು ಏನು ಮಾಡಬಲ್ಲವು? ಯಾವತ್ಕಾಲವೂ ಶುಭವು ಹೂರ್ತವೇ; ಸರ್ವಕರ್ಮಗಳೂ ಪುಣ್ಯದಾಯಿಗಳೇ. "ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ. ರಾಶಿಕೂಟ ಋಣ ಸಂಬಂಧ ವುಂಟೆಂದು ಹೇಳಿರಯ್ಯ. ಚಂದ್ರಬಲ ತಾರಾಬಲವುಂಟೆಂದು ಹೇಳಿ ರಯ್ಯ. ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯ." ಎನ್ನುವ ಭಕ್ತನಿಗೆ ಸಕಲಗ್ರಹಬಲವೆಲ್ಲವೂ ಸಂಗನೇ ಆಗಿ ಬಿಡುವನು. "ಒಡಲ ಕಳವಳಕ್ಕಾಗಲಿ, ಬಾಯುಸವಿಗಾಗಲಿ ಉಣ್ಣಲಾರೆ"ನೆಂದು ಬಸವಣ್ಣನು ಆಣೆಯಿಟ್ಟುಕೊಂಡಿದ್ದನು; ಎಲ್ಲರಿಗೂ ಸಹಜಕರ್ಮವಾದ ಊಟವನ್ನು ಬಸವಣ್ಣನು, ಕರಣವೃತ್ತಿಗಳಡಗುವ ಮಹಾ-ಸಾಧನೆಯನ್ನಾಗಿ ಮಾಡಿ ಕೊಂಡಿದ್ದನು. "ಮೌನದಲುಂಬುವುದು ಆಚಾರವಲ್ಲ; ಲಿಂಗಾರ್ಪಿತ ಮಾಡಿದ ಬಳಿಕ ತುತ್ತುತುತ್ತಿಗೊಮ್ಮೆ ಶಿವಶರಣೆನುತಿರಬೇಕು. ಕೂಡಲ ಸಂಗನ ನೆನೆವುತ್ತ ಉಂಡರೆ ಕರಣವೃತ್ತಿಗಳಡಗುವವು. "ಅಟ್ಟಡಗೆಯು ವಿಷವನ್ನು ಕೊಟ್ಟಲ್ಲದೆ ಉಣ್ಣೆನೆಂ"ಬ ಭಾಷೆಯು ಬಸವಣ್ಣನು, ಅದನ್ನು ಕೆಂಭಾವಿಯ ಭೋಗಯ್ಯನಿಂದ ಕಲಿತನು.

ಬಸವಣ್ಣನು ಲಿಂಗವಿಕಾರದಿಂದ ಅಂಗವಿಕಾರವನ್ನೂ, ಜಂಗಮ ವಿಕಾರದಿಂದ ಧನವಿಕಾರವನ್ನೂ, ಪ್ರಸಾದವಿಕಾರದಿಂದ ಮನವಿಕಾರ ವನ್ನೂ ಕಳಕೊಂಡು ಅಚ್ಚಲಿಂಗೈಕ್ಯನಾದನು.

**ಕಂಡುದೇನು?—ಹೇಗ?**

ಎಲ್ಲಕ್ಕೂ ಮೊದಲು, ಬಸವಣ್ಣನಿಗೆ ತನ್ನ ಹಿಂದಿನ ಏಳು ಜನ್ಮ ಗಳ ಅರಿವು ಉಂಟಾಗಿತ್ತೆಂದು ತೋರುತ್ತದೆ. ಪ್ರಥಮಭವಾಂತರದಲ್ಲಿ ಶಿಲಾದನೆಂಬ ಗಣೇಶ್ವರನಾಗಿಯೂ, ಎರಡನೆಯ ಭವಾಂತರದಲ್ಲಿ ನೀಲ ಲೋಹಿತಗಣೇಶ್ವರನಾಗಿಯೂ ಹುಟ್ಟಿದನಂತೆ. ನೀಲಲೋಹಿತ, ಮನೋ ಹರ, ಕಾಲಲೋಚನ, ವೃಷಭ, ಬಸವ ಈ ಹೆಸರುಗಳು ಮುಂದಿನ ಐದು ಜನ್ಮದವಂತೆ. ಆ ಏಳು ಜನ್ಮಗಳಲ್ಲಿಯೂ ದೇವದೇವನ ಯಾವ ಯಾವ ಸೇವೆ ಕೈಕೊಂಡಿದ್ದನೆಂಬುದನ್ನು ತಿಳಿಸಿದ್ದಾನೆ. ಭೃತ್ಯ, ಕಾರುಣ್ಯ, ಲೀಲಾವಿನೋದಿ, ಪುನಃಪ್ರೇರಕ, ಸರ್ವಕಾಲ ಸಂಹಾರಕ, ದೇವವಾ ಹನ, ಒಕ್ಕುದಮಿಕ್ಕುದಕ್ಕೆ ಯೋಗ್ಯ ಆಗುವಂತೆ ಕರುಣಿಸಿದಿರೆಂದು ಬಿನ್ನವಿಸಿಕೊಂಡಿದ್ದಾನೆ.

ಲಿಂಗಧ್ಯಾನನಿರತನಾದ ಬಸವಣ್ಣನು ಸಂಗಮದೇವನ ಸ್ಪರ್ಶಸು ಖವನ್ನು ಉಂಡಿದ್ದಾನೆ; ಮೈತುಂಬ ಕಣ್ಣುಗಳರಳಲು ಅವೆಲ್ಲವುಗಳಿಂಲೂ ಆತನ ಅತುಲ ಸೌಂದರ್ಯಸುಧೆಯನ್ನು ಈಂಟಿದ್ದಾನೆ. "ಭಾವದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪ" ಸಂಗನನ್ನು ಕಂಡಿದ್ದಾನೆ. ಅಂತೆಲೇ—

"ನಿಮ್ಮ ನೋಟವನಂತ ಸುಖ. ನಿಮ್ಮ ಕೂಟ ಪರಮಸುಖ ವಯ್ಯ. ಅಷ್ಟಕೋಟಿರೋಮಂಗಳೆಲ್ಲ ಕಂಗಳಾಗಿ ನೋಡುತಿರ್ದೆನು. ಕೂಡಲಸಂಗಮದೇವಯ್ಯ, ನಿಮ್ಮ ನೋಡಿ ನೋಡಿ ಮನದಲ್ಲಿ ರತಿ ಹುಟ್ಟಿ, ನಿಮಿರ್ದುವೆನ್ನ ಕಳೆಗಳು" ಎಂದು ಘೋಷಿಸಿದ್ದಾನೆ.

ಆದರೆ, ಅತೀವ ಸ್ಪಷ್ಟವಾದ ನಿದರ್ಶನವನ್ನು ಕೆಳಗಿನ ಮಾತಿನಲ್ಲಿ ಹೇಳಿದ್ದಾನೆ. "ಪಶ್ಚಿಮ ಪದ್ಮಾಸನದಲ್ಲಿ ಕುಳ್ಳಿರ್ದು, ನಿಟ್ಟೆಲು ಮುರಿದು ತುಟಿ ಮಿಡುಕದೆ ಅಪ್ಪಿಯಾಡಿತ್ತಲ್ಲಾ! ಬಿಟ್ಟ ಕಣ್ಣು. ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಕಟ್ಟಿ ಗುಡಿಯ. ಕೂಡಲಸಂಗಮದೇವ ಹಿಡಿವಡೆದ."

ಮನಃಪ್ರವೇಶಿಯಾಗಿ ಭಕ್ತನು ದೇವದೇವನನ್ನು ಪೂಜಿಸುತ್ತ ತನುಧರ್ಮವನ್ನು ಮರೆಯುವನು; ಹಾಗೂ ದೇವನ ಪ್ರತಿಬಿಂಬದಂತಿ

ರುವ ಶರಣನೇ ಅಂಥ ಐಕ್ಯಾನುಸಂಧಾನವನ್ನು ಪಡೆಯಬಲ್ಲನು. ಆಗ "ಕೂಡಲಸಂಗಮದೇವ, ನೀನೆನಗೆ ಚಿಕ್ಕ ತಮ್ಮ" ಎಂದೂ ಸಂಬೋಧಿಸಬಲ್ಲನು. ಉಂಬುವ ಬಟ್ಟಲೂ ನೋಡುವ ದರ್ಪಣವೂ ಕಂಚಿನವೇ. ಆದರೆ ಶಿಲ್ಪಿಯ ಕೈಗೆ ಸಿಕ್ಕ ಕಂಚು ದರ್ಪಣವಾಗುತ್ತದೆ; ಬಟ್ಟಲು-ದರ್ಪಣಗಳ ಜಾತಿ ಒಂದೇ ಆದರೂ ಬೆಲೆ ಬೇರೆ. ಕುರಿಹಿಂಡು ಕಬ್ಬಿನ ತೋಟ ಹೊಕ್ಕರೆ, ಅವು ತಮರಸದ ಹೊರಗಣ ಎಲೆಯನ್ನೇ ಮೆಲಿದವು; ನಿಮ್ಮನರಿದ ಮದಕರಿಯು ಮಾತ್ರ ಕಬ್ಬಿನ ತನಿರಸದ ಸವಿಯನ್ನು ಬಲ್ಲದು. ಐದೆಸೆಯಿಂದ ಸಾಯುವ ವರೆಗೂ ಕಟ್ಟಿಕೊಳ್ಳುವ ಲಿಂಗದಲ್ಲಿ ಬಸವಣ್ಣನು ಏನು ಕಂಡನು ? ಕೇಳಿರಿ--

"ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಗುಟ. ಅಗಮ್ಯ ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೇ ನೀವೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ ಕೂಡಲ ಸಂಗಮದೇವ." ಅಂಥ ಕೂಡಲ ಸಂಗಮದೇವರನ್ನು ತೋರಿದವ ಚೆನ್ನಬಸವಣ್ಣನೆಂದು ಪ್ರಾಮಾಣಿಕತೆಯಿಂದ ಬಸವಣ್ಣನು ಒಪ್ಪಿಕೊಂಡಿದ್ದಾನೆ

## ಅದರ ಸವಿ.

ಸತ್ತವರಿಗೇ ಸ್ವರ್ಗ ಕಾಣುವದು. ತಿಂದವನೇ ಕಲ್ಲು ಸಕ್ಕರೆಯ ಸವಿಯನ್ನು ಬಲ್ಲನು. ಲಂಡನದ ಭವ್ಯತೆಯಾಗಲಿ, ಪ್ಯಾರೀಸಿನ ವೈಭವವಾಗಲಿ ನಮಗೆ ಕಾಣಿಸುವುದು ಭೂಗೋಲ ಪುಸ್ತಕಗಳಲ್ಲಿ. ಪುಸ್ತಕವನ್ನೆಷ್ಟು ಓದಿದರೂ ಪ್ರತ್ಯಕ್ಷ ನೋಡಿದ್ದರ ಆನಂದವಾಗಲರಿಯದು. ವಾಚನದಿಂದ ಸಂದರ್ಶಿಸಿದರಂತೂ ಅದು ಸಾರ್ಥಕ. ಓದಿಯಾದ ಮೇಲೆ ಸಂದರ್ಶಿಸಿದರಂತೂ ಅದು ಪೂರ್ಣದರ್ಶನ. ಸಮುದ್ರದ ಆಳವನ್ನು ಅಳೆಯ ಹೊರಟ ಉಪ್ಪಿನ ಬೊಂಬೆಗಳು ಕರಗಿ ಹೋದವು, ಹೋಗಲಿ. ಜೀವಿಸಿದ್ದಾಗಲೇ ಭವ್ಯಜನ್ಮವನ್ನು ಗಳಿಸಿದ ಮಹಾನುಭಾವರ ಸಂದೇಶವೇ ನಮಗೀಗ ಬೇಕಾದುದು. ಸಂಗನ ಐಕ್ಯಸುಖವು "ಕನ್ನೆಯ ಸ್ನೇಹದಂತೆ, ನನೆಯೊಳಗಣ ಪರಿಮಳದಂತೆ; ತನ್ನೊಳಗೇ ನನ್ನನ್ನು ಬೈತಿಟ್ಟ ನನ್ನ ನಲ್ಲ ಎಲ್ಲರ ಪರಿಯಂತಲ್ಲ"ವೆಂದು ಸಾಧ್ವೀಸತಿಯಂತೆ ಬಸವಣ್ಣನು ಹೊಟ್ಟೆಬಿಚ್ಚಿ ಹೇಳಿದ್ದಾನೆ. ಮತ್ತೆ ಏನೆಂದು ಕೇಳಿದರೆ--

" ಕಂಗಳು ತುಂಬಿದ ಬಳಿಕ ನೋಡಲಿಲ್ಲ. ಕಿವಿ ತುಂಬಿದ ಬಳಿಕ ಕೇಳಲಿಲ್ಲ. ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ. ಮನ ತುಂಬಿದ ಬಳಿಕ ನೆನೆಯಲಿಲ್ಲ. " ಎಂದು ಉತ್ತರವನ್ನಿತ್ತಿದ್ದಾನೆ. ಇನ್ನು ಮುಂದೆ ಆತನ ಪ್ರಾಣಶರೀರಗಳ ರೀತಿಯೇ ಬೇರೆ. " ಕಾಯುವು ಮಾತೆಯಾಗಿ, ಜೀವವು ಪಿತನಾಗಿ ಕೂಡಲಸಂಗಮದೇವನಂತಪ್ಪ ಮಗ ಹುಟ್ಟಿದರೆ " ಸ್ವರ್ಗವೇತಕ್ಕೆ? ಮೋಕ್ಷವೇತಕ್ಕೆ? ದೇವನೊಡನೆ ಬೆರೆತ ಜೀವನ ತ್ರಿವಿಧ ನಾಸ್ತಿಯಾಗಿರುವದರಿಂದ " ತಾನು ಬೇರೆ, ದೇವ ಬೇರೆ " ಎಂಬ ದ್ವಿಭಾವನೆಯು ಉಳಿಯುವದಿಲ್ಲ. ಆ ಅದ್ವೈತಾನಂದದಲ್ಲಿ ಭಕ್ತನು ದೇವನನ್ನು ಸ್ತುತಿಸಿದರೇನು? ತನ್ನನ್ನು ತಾನು ಹೊಗಳಿಕೊಂಡರೇನು? ಬಸವಣ್ಣನೂ ಹಾಗೇ ಮಾಡಿದ್ದಾನೆ. " ತ್ರಿವಿಧನಾಸ್ತಿಯಾದ ಬಳಿಕ ಎನ್ನ ನಾ ಹಾಡಿಕೊಂಡೆ ಕಾಣಾ. " ಹೀಗೆ ನದಿಯೊಳಗೆ ನದಿ ಬೆರೆದಂತಾಗದನ್ನಕ್ಕ ಲಿಂಗವ ಪೂಜಿಸಿ ಫಲವೇನಯ್ಯ? " ಎಂದು ಪ್ರಶ್ನಿಸುವ ಬಸವಣ್ಣನಿಗೆ ಇಂದು ನಾವೇನು ಹೇಳಬೇಕು?

" ಗುರುವಿಗಿಂತ ಶಿಷ್ಯ ಮೇಲಾಗ್ಲಿ; ತಂದೆಗಿಂತ ಮಗ ಮೇಲಾಗ್ಲಿ." ಎನ್ನುವ ತೀವ್ರ ಪಕ್ಷದವರ ಮಾತನ್ನು ಅನಕ ಬದಿಗಿರಿಸಿ, " ಗುರುವಿನಂತೆ ಶಿಷ್ಯ, ತಂದೆಯಂತೆ ಮಗ " ಎನ್ನುವ ಮಂದಪಕ್ಷದವರ ಮಾತನ್ನಾದರೂ ನಾವು ಮನನ ಮಾಡಲಿಕ್ಕೆ ಬೇಕು. ಬಸವಣ್ಣನು ನಮ್ಮವನು, ನಮ್ಮ ನಾಡಿನವನು ಎಂಬ ಅಭಿಮಾನದಲ್ಲಿ ಅದೆಷ್ಟು ಶಕ್ತಿಯಿದ್ದರೂ, ಅಷ್ಟರಿಂದಲೇ ನಮ್ಮ ಕರ್ತವ್ಯವು ಕೊನೆಗಾಣುವದಿಲ್ಲ. ಅವನ ಜೀವನ, ಹೋರಾಟ, ಗೆಲವು, ಸಾರ್ಥಕತೆ ಇವನ್ನೆಲ್ಲ ಮನಗಂಡು " ಎಂದೋ ಎಂದು? ಈ ಸಂಸಾರ ದಂದುಗ ಹಿಂಗುವದು? " ಎಂಬ ರೇಚಕವನ್ನು ತೆಗೆದುಕೊಂಡ ದಿನವೇ ಆಯುಷ್ಯದಲ್ಲಿ ಸಾರ್ಥಕ ದಿನ. ಅಂದೇ ಹಳೆಯದರ ಮರಣವೂ ಹೊಸದರ ಜನ್ಮವೂ ಆದಂತೆ. ಅಂದಿಗೆ ಮರೆತ ಮಾನವನು ಅಳಿದು, ಅರಿತ ಶರಣನು ಉಳಿಯುವ ದಾರಿ ಆರಂಭವಾಯಿತೆನ್ನಬೇಕು. ಅದೆಷ್ಟೋ ಕನ್ನಡಿಗರ ಹೃದಯಮಂದಿರದಲ್ಲಿ ನಂದಿಹೋದ ದೀಪವನ್ನು ಮರಳಿ ಹೊತ್ತಿಸಿ, ನಂದಾದೀಪ ಮಾಡುವ ಸಾಮರ್ಥ್ಯವುಳ್ಳ " ಕನ್ನಡ ಭಕ್ತಿದೀಪಕ"ವು ಇಂದಿಗೂ ಬೆಳಗಿ ಕಗ್ಗತ್ತಲೆಯ ರಾತ್ರಿಯಲ್ಲಿಯೂ ಮಾರ್ಗದರ್ಶಿಯಾಗುತ್ತಲಿದೆ.

---

# ಗುರು ಲಿಂಗ ಜಂಗಮ.

( ಲೇಖಕ:— ಬಸವಪ್ಪ ಚೆನ್ನಪ್ಪ ಪಟ್ಟೇದ. )

( ೪ )

ಈ ವಿಷಯದ ಮೇಲೆ ಇದು ನಾಲ್ಕನೆಯ ಲೇಖ. ಮೊದಲನೆಯದರಲ್ಲಿ ಸ್ವಗತ ಗುರು ಲಿಂಗ ಜಂಗಮಗಳ ಸ್ವರೂಪವನ್ನೂ ಅವುಗಳ ಆರಾಧನೆಯನ್ನೂ, ಎರಡನೆಯದರಲ್ಲಿ ಅವುಗಳ ಪರಸ್ಪರ ಸಂಬಂಧವನ್ನೂ, ಮೂರನೆಯದರಲ್ಲಿ ಸಮಾಜಾಂತರ್ಗತರೂ ಅಧಿಕಾರಾರೂಢರೂ ಎನಿಸಿದ ಕೃತ್ರಿಮ ಗುರು ಲಿಂಗ ಜಂಗಮರ ವಿವರಣೆಯನ್ನೂ ಕುರಿತು ಬರೆಯಲಾಗಿದೆ. ಈ ಸಾರೆ ಅವುಗಳ ಸೃಷ್ಟಿಗತ ಸ್ವರೂಪವನ್ನು ಅದು ಹೇಗೆ ಸೇವಿಸಬೇಕೆಂಬುದನ್ನು ಹೇಳಬೇಕಾಗಿದೆ. ಜಗತ್ತಿನೊಳಗಿನ ಪ್ರತಿಯೊಂದು ಪದಾರ್ಥದಲ್ಲಿ ಗುರು ಲಿಂಗ ಜಂಗಮಗಳು ತಾತ್ವಿಕ ರೀತಿಯಿಂದ ತೋರುತ್ತಿದ್ದರೂ, ನಿರಿಂದ್ರಿಯ ವರ್ಗದ ಬಗ್ಗೆಯಂತೂ ಆಲೋಚಿಸುವ ಕಾರಣವಿಲ್ಲ. ಸೇಂದ್ರಿಯ ವರ್ಗದಲ್ಲಿ ಪ್ರಾಣಿ ವನಸ್ಪತಿಗಳು ಬರುತ್ತವೆ. ಇವುಗಳಲ್ಲಿ ಪ್ರಾಣಿಗಳು ಚರನಾಗಿಯೂ ವನಸ್ಪತಿಗಳು ಅಚರವಾಗಿಯೂ ಇರುವವು. ಆದುದರಿಂದ ನಿಶ್ಚಲವಾದ ಈ ವನಸ್ಪತಿಗಳಾದರೂ ಅಷ್ಟೇನು ಗಣ್ಯವಾದವುಗಳಲ್ಲ. ಆದರೂ "ಲಿಂಗರೂಪಂ ಜಗತ್ಸರ್ವಂ" ಎಂದು ಮನಗಂಡ ಅನೇಕ ಸತ್ಪುರುಷರು ಅವನ್ನು ಸಹ ನೋಯಿಸಲಿಕ್ಕೆ ಹಿಂದು ಮುಂದಾಗುವರು. ಗಿಡ ಬಳ್ಳಿಗಳಲ್ಲಿದ್ದ ಹಣ್ಣು ಹೂ ಎಲೆಗಳನ್ನು ಸಹ ಹರಿಯಲು ಅವರು ಉದ್ಯುಕ್ತರಾಗುವದಿಲ್ಲ. ತಾವಾಗಿಯೇ ಉದುರಿ ಬಿದ್ದಂತಹವನ್ನೇ ಇವರು ಉಪಯೋಗಿಸುತ್ತಿರುವದನ್ನು ಕಂಡೂ ಕೇಳಿಯೂ ಬಲ್ಲವರನೇಕರುಂಟು. ಆದರೆ ಪ್ರಾಣಿಗಳಿಗೆ ಆಹಾರದ ಪೂರೈಕೆಯು ಮುಖ್ಯವಾಗಿ ವನಸ್ಪತಿಕೋಟಿಯಿಂದಲೇ ಆಗುತ್ತಿರುವದರಿಂದ, ಬಹುಜನ ಸಮಾಜವು ಅವನ್ನಾದರೂ ಬಹುಶಃ ನಿರಿಂದ್ರಿಯ ಸೃಷ್ಟಿಯಂತೆಯೇ ಕಾಣುವದು. ಇನ್ನುಳಿದುದು ಪ್ರಾಣಿಕೋಟಿಯು ಮಾತ್ರ. ಸಕಲ ಪ್ರಾಣಿಗಳನ್ನು ಆತ್ಮವತ್ ಭಾವಿಸಿ ವರ್ತಿಸಬೇಕೆಂದು ಧರ್ಮಶಾಸ್ತ್ರವು ಹೇಳುತ್ತದೆ. ಆದರೆ ಸ್ವಾರ್ಥಮೂಲಕ ಜಹು ಜನರು ಇದನ್ನು ಮನ್ನಿಸದಿರುವದು ದುಃಖದ ಸಂಗತಿಯು. ಯಾವ ಪ್ರಾಣಿಯನ್ನೂ ಪೀಡಿಸಬಾರದು. ಘಾತಿಸಬಾರದು.

ದಯದಿಂದಲೇ ಅವನ್ನು ನಡಿಸಿಕೊಳ್ಳಬೇಕು. ದನಕರು ಮೊದಲಾದ ವನ್ನು ಸರಿಯಾಗಿ ಕಾಪಾಡಿ ಉಪಚರಿಸಿ, ಅವುಗಳ ಪ್ರಯೋಜನವನ್ನು ಹೊಂದಬೇಕು. ಪೀಡಿಸುವ ಪ್ರಾಣಿಗಳನ್ನು (ಹುಲಿ, ಹಾವು, ತಿಗುಣಿ ಚಿಕ್ಕಾಡಾದಿಗಳನ್ನು), ಅವುಗಳ ಪೀಡೆಯನ್ನು ಪರಿಹರಿಸಿಕೊಳ್ಳುವ ಸಲು ವಾಗಿ, ಹಿಂಸಿಸಲು ಅಡ್ಡಿಯಿಲ್ಲೆಂದು ಶಾಸ್ತ್ರಾಜ್ಞೆಯಿದ್ದರೂ ಶಕ್ಯವಿದ್ದ ಮಟ್ಟಿಗೆ ಅದನ್ನು ತಪ್ಪಿಸುವದೇ ಕರ್ತವ್ಯ. ಇನ್ನು ಪ್ರಾಣಿಗಳಲ್ಲೆಲ್ಲ ಶ್ರೇಷ್ಠನೆನಿಸುವ ಮನುಷ್ಯನ ವಿಷಯವಾಗಿ ಮಾತ್ರ ವಿವೇಚಿಸುವದು ಉಳಿಯಿತಷ್ಟೇ. ಇಂದಿನ ಬರವಣಿಗೆಯ ಮುಖ್ಯ ಉದ್ದೇಶವು ಅದೇ ಇರುವದು. ಮನುಷ್ಯನು ಜ್ಞಾನವಿಶಿಷ್ಟವಾದ ದೇಹವನ್ನು ಪಡೆದು ಜನ್ಮಿ ಸಿರುವದರಿಂದ, ಅವನು ಆತ್ಮೋದ್ಧಾರ ಮಾಡಿಕೊಳ್ಳುವದೇ ಅತ್ಯವಶ್ಯ ಕರ್ತವ್ಯ. ಅದೇ ಅವನ ಗುರಿಯಾಗಿರುವದು ವಿಹಿತ! ಆದರೂ ಮಾಯಾ ವಿಷ್ಟನಾಗಿ ವಿಷಯಗಳತ್ತ ಹೊರಳಿ ಸಂಸಾರ ಮಗ್ನನಾಗಿ, ದುಃಖ ಪರಂಪರೆಗೆ ಈಡಾಗುತ್ತಾನೆ. ಆದರಲ್ಲಿ ತಲೆಗೆ ಬಡೆದು ಅನುಭವಪಡೆದು ಅನೇಕರು ಅರಿವುಳ್ಳವರಾಗಿ ಎಚ್ಚರಿಯುವರು. ಇಂತಹರು ಜೀವನದಲ್ಲಿ ಸಂಸಾರದ ಉಪಭೋಗವನ್ನು ಹೊಂದುತ್ತಿದ್ದರೂ, ತಮ್ಮ ಉದ್ಧಾರವು ಅಂದರೆ ಲಿಂಗಾಂಗ ಸಾಮರಸ್ಯವು ತಪ್ಪದೆ ಒದಗುವಂತೆ ತನು, ಮನ (ಪ್ರಾಣ-ಜ್ಞಾನ)ಗಳ ವಿನಿಯೋಗವನ್ನು ಇಷ್ಟರೀತಿಯಲ್ಲಿ ಮಾಡುವರು. ಅದೇ ಅವರ ಭಕ್ತಿಯು. ಇಂತಪ್ಪ ಭಕ್ತಿಯಲ್ಲಿ ಚರಿಸುವವರೇ ಭಕ್ತರು. ಸಂಸಾರದ ವಿಷಯಗಳಿಗೆ ಮೋಹಿಸಿ ಅತ್ಯಾಸಕ್ತಿಯನ್ನು ಹೊಂದಿ ಜಿಹ್ವಾ ಗುಹ್ಯಾಲಂಪಟರಾಗಿ ಮೈಮರೆದು ವರ್ತಿಸಿ, ಭವಚಕ್ರದಲ್ಲಿ ಬೇಸರಿಲ್ಲದೆ ತೊಳಲಾಡುವವರೇ ಭವಿಗಳು.

ಭಕ್ತನಿಗೆ ಜನ್ಮಸಿದ್ಧ ಪ್ರಾಪ್ತವಾಗಿರುವ ದೇಹ ಪ್ರಾಣ ಜ್ಞಾನಗಳು, ಮಾಯಾವರಣದ ಮೂಲಕ ಮರವೆಗೊಳಗಾಗಿರುವದರಿಂದ, ಅವುಗ ಳನ್ನು ಎಚ್ಚರಿಸಿ ಶುದ್ಧಗೊಳಿಸಿ ತನ್ನ ಉದ್ಧಾರಕ್ಕೆ ಅನುಕೂಲಪಡಿಸಿ ಕೊಳ್ಳುವದು, ಮಹತ್ವದ ಕಾರ್ಯವಾಗಿದೆ. ಭೂಮಿಯಲ್ಲಿ ಸುವರ್ಣ ವಿದ್ದರೂ ಅದು ಕಲ್ಲು ಮಣ್ಣು ಮೊದಲಾದವುಗಳ ಮಿಶ್ರಣದಿಂದ ನಿರು ಪಯುಕ್ತವಾಗಿರುವದಷ್ಟೇ, ಅದನ್ನು ಹೇಗೆ ಶೋಧಿಸಿ ಸಂಸ್ಕಾರಗೊಳಿಸಿ ಸಿದ್ಧಪಡಿಸಲಿಕ್ಕೆ ಸಂಶೋಧಕರು ಬೇಕೋ, ಹಾಗೆ ನಮಗಾದರೂ ದೇಹ ಪ್ರಾಣ ಜ್ಞಾನಗಳನ್ನು ಸಂಸ್ಕರಿಸಿ ನಿರ್ಮಲಗೊಳಿಸಿ ಗುರು ಲಿಂಗ

ಜಂಗಮ ಸ್ವರೂಪವನೆಯ್ದಿಸಲಿಕ್ಕೆ ಸಮಾಜದಲ್ಲಿ ಅಧಿಕೃತರಾದ ಹೊಣೆಗಾರಿಕೆಯು ಗುರು ಜಂಗಮರು ಬೇಕೆಂದು ತಿಳಿದು ಬುದ್ಧ್ಯಾ ಅವರು ನಿರ್ಮಿತರಾಗಿರುವರು. ಇವರು ಸುಜ್ಞಾನಿಗಳೂ ನಿಃಸ್ವಾರ್ಥರೂ ಕರ್ತವ್ಯದಕ್ಷರೂ ಪರಹಿತಕಾಂಕ್ಷಿಗಳೂ ಇರಬೇಕಾದುದು ಅವಶ್ಯ. ಆದುದರಿಂದಲೇ ಹಿಂದಣ ಲೇಖದಲ್ಲಿ ಅವರ ಬಗ್ಗೆ ಹೆಚ್ಚಿಗೆ ಚರ್ಚಿಸುವದು ಅನಿವಾರ್ಯವಾಯಿತು. ಅದಕ್ಕೆ ಸಂಬಂಧಿಸಿದ ಅನೇಕರಿಗೆ ಅದು ಕಟುವಾಗಿ ತೋರಬಹುದು. ಬಟ್ಟೆಗಳನ್ನು ತೊಳೆಯುವ ಮಡಿವಾಳನು, ಬಟ್ಟೆಗಳಿಗೆ ಪೆಟ್ಟುಹಾಕುವಂತೆ ಮೇಲೆ ಮೇಲೆ ನೋಡುವವರಿಗೆ ಕಾಣುತ್ತಿದ್ದರೂ, ಮಡಿವಳನ ಕಟಾಕ್ಷವು ಬಟ್ಟೆಗಳ ಮೇಲಿರದೆ ಅದಕ್ಕೆ ಅಂಟಿಕೊಂಡ ಮಲಿನತೆಯ ಕಡೆಗೇ ಇರುವದು. ಅದು ಹೊರಟುಹೋದರೆ, ಬಟ್ಟೆಗಳು ಹೆಚ್ಚು ಪ್ರಕಾಶಮಾನವಾಗಿ ಮತ್ತಿಷ್ಟು ಆದರಕ್ಕೂ ಪ್ರೇಮಕ್ಕೂ ಒಳಗಾಗುವವು. ಅದೇ ದೃಷ್ಟಿಯಿಂದ ನನ್ನ ಬರೆಹವನ್ನಾದರೂ ಕಾಣುವರೆಂದು ನೆನಿಸುತ್ತೇನೆ. ಅದು “ಅಧರಕ್ಕೆ ಕಹಿ ಎನಿಸಿದರೂ ಉದರಕ್ಕೆ ಸಿಹಿ” ಯಾಗಿರುವದೆಂಬದನ್ನು ಮರೆಯಲಾಗದು, ಸಮಾಜಾಧಿಕೃತರಾದ ಈ ಗುರುಲಿಂಗಜಂಗಮರ ಕಾರ್ಯವು ಯಶಸ್ವಿಯಾಗಬೇಕಾದರೆ, ಅದಕ್ಕೆ ಸಮಾಜದೊಳಗಿನ ಪ್ರತ್ಯೇಕ ವ್ಯಕ್ತಿಯು ಮನಃಪೂರ್ವಕವಾಗಿ ಸಹಾಯಮಾಡಬೇಕು. ಅಲ್ಲದೆ ಅವರ ಬಗ್ಗೆ ಕೃತಜ್ಞತೆಯನ್ನು ವಹಿಸಬೇಕು. ಭಕ್ತಿಯುತರಾಗಿ ವರ್ತಿಸಬೇಕು. ಅದರಂತೆಯೇ ಅವರಿಂದ ಸಂಸ್ಕಾರ ಹೊಂದತಕ್ಕ ಶಿಷ್ಯರಾದರೂ ಸತತ ಪ್ರಯತ್ನದಿಂದ ತಾವು ನಿಜವಾದ ಭಕ್ತರಾಗುವಂತೆ ಸಾಹಸಪಡುವದು ಅತ್ಯಂತ ಇಷ್ಟವಾಗಿದೆ.

ಸಮಾಜವು ಸುಸೂತ್ರವಾಗಿ ಸಾಗಬೇಕೆಂದು ನೀತಿಧರ್ಮವು ಅವತರಿಸಿದೆ. ಆದುದರಿಂದ ಸಮಾಜ ಪ್ರಾಣಿಯಾದ ಮಾನವನು ಅದನ್ನು ತಪ್ಪದೆ ಅನುಸರಿಸಿ ನಡೆಯಲಿಕ್ಕೆ ಬದ್ಧನಾಗಿರುವನು. ಅದು ಅವನಿಗೆ ಬಿಡಲಾರದ ಕರ್ಮ. ನೀತಿಯನ್ನು ಪಾಲಿಸಿದರೆ ಸದಾಚಾರವು ನೆಲೆಗೊಳ್ಳುವದು. ನೀಚ ಸ್ವಾರ್ಥಕ್ಕೆ ಅಜ್ಞಾನದಿಂದ ಆಹುತಿಯಾಗಿ ಮನುಷ್ಯನು ನೀತಿಯನ್ನು ಧಿಕ್ಕರಿಸಿ ನಡೆದು, ಅಧೋಗತಿಗೀಡಾಗುತ್ತಾನೆ. ಮನೆಯ ಹಿರಿಯರೂ ಸಮಾಜದ ಮುಖಂಡರೂ ನೀತಿವಂತರಾದರೆ, ಆ ಕುಟುಂಬದ ಹಾಗು ಸಮಾಜದ ಜನರಾದರೂ ಅವರ ಮೇಲ್ಪಂಕ್ತಿ

ಯನ್ನು ಮುಂದಿಟ್ಟುಕೊಂಡು ನಡೆಯುತ್ತಾರೆ. ಮನುಷ್ಯ ಪ್ರಾಣಿಯು ಅನುಕರಣಪ್ರಿಯನು. ಆದುದರಿಂದ ಹೊಣೆಗಾರ ವ್ಯಕ್ತಿಗಳಂತೂ ಬಹು ಎಚ್ಚರದಿಂದ ನೀತಿಯನ್ನು ಬಿಡದೆ ಪಾಲಿಸಲೇಬೇಕು. ವೀರಶೈವರು ಭವಿಗಳಲ್ಲ ಭಕ್ತರು. ದೇಹತ್ರಯದಲ್ಲಿ ಲಿಂಗತ್ರಯವನ್ನು ಧರಿಸಿ, ದಾಸೋಹತ್ರಯದಿಂದ[೧] ವರ್ತಿಸಿ ಮಲತ್ರಯವನ್ನು ನಾಶಗೊಳಿಸುವವರು. ಒಂದೇ ಒಂದು ಜನ್ಮದಲ್ಲಿ ಮುಕ್ತಿಯನ್ನು ಪಡೆಯತಕ್ಕವರು. ಅಂದ ಮೇಲೆ ಅವರು ಅದೆಷ್ಟು ಶುದ್ಧರೀತಿಯಿಂದ ಜಗತ್ತಿನಲ್ಲಿ ನಡೆದುಕೊಳ್ಳತಕ್ಕದ್ದೆಂಬದನ್ನು ಗಮನಿಸಬೇಕು.

ಭಕ್ತನು ವ್ಯಕ್ತಿಗತ ಗುರು (ದೇಹ), ಲಿಂಗ (ಪ್ರಾಣ), ಜಂಗಮ (ಸುಜ್ಞಾನ)ಗಳ ಸೇವೆಯನ್ನು ಸರಿಯಾಗಿ ಮಾಡಿಕೊಂಡು ಉನ್ನತಿಯನ್ನು ಸಾಧಿಸುವಂತೆಯೇ, ಸಮಾಜದೊಳಗಿನ ಎಲ್ಲ ಜನರ ಗುರು ಲಿಂಗ ಜಂಗಮ ಸೇವೆಗೆ, ತಾನು ಯಾವ ರೀತಿಯಿಂದಲೂ ವಿಘ್ನಕಾರಿಯಾಗದೆ ಒಳಿತಾಗಿ ಸಹಾಯವಾಗುವಂತೆ ವರ್ತಿಸುವದು ಅವನ ಪವಿತ್ರ ಕರ್ತವ್ಯವಾಗಿದೆ, ಗುರುವಿಗೆ ತನುವನ್ನೂ, ಲಿಂಗಕ್ಕೆ ಮನವನ್ನೂ, ಜಂಗಮಕ್ಕೆ ಧನವನ್ನೂ (ವಿಷಯ ರೂಪಿ ಸರ್ವ ಸಂಸಾರವನ್ನೂ) ಒಪ್ಪಿಸಿದಾಗಲೇ ಅವನ ಉದ್ಧಾರಕ್ಕೆ ಇಂಬುದೊರೆಯುವದು. ಶರೀರ ದ್ವಾರವಾಗಿ ಸದಾಚಾರ ಸತ್ಕ್ರಿಯೆಗಳನ್ನನುಸರಿಸಿ ನಡೆಯುವದೇ, ಗುರುವಿಗೆ ತನುವನೊಪ್ಪಿಸುವದರ ಅರ್ಥವು. ಪ್ರಾಣದ ಜೀವಭಾವನೆಯು ನಷ್ಟವಾಗಿ ಅದು ಶುದ್ಧಾತ್ಮ ಸ್ವರೂಪವನೆಯ್ದುವಂತೆ, ಮನವು ವಿಷಯಗಳತ್ತ ಹರಿದಾಡುವದನ್ನು ನಿಲ್ಲಿಸಿ, ನಿರ್ಮಲತೆಯನ್ನು ಹೊಂದಿ ಲಿಂಗದಲ್ಲಿ (ಆತ್ಮನಲ್ಲಿ) ಸ್ಥಿರವಾದರೆ, ಮನವನ್ನು ಲಿಂಗಕ್ಕೆ ಅರ್ಪಿಸಿದಂತಾಗುವದು. ಜಂಗಮಕ್ಕೆ ಧನವನೊಪ್ಪಿಸುವದೆಂದರೆ, ವಿಷಯರೂಪ ಸರ್ವ ಪದಾರ್ಥಗಳನ್ನು (ಇವೇ ಧನ!) ಲಿಂಗಸ್ವರೂಪವೇ ಇದೆಂಬ ಅನುಭಾವವನ್ನು ಹೊಂದುವದೆಂದು ತಿಳಿಯಬೇಕು. ಇಂತಹ ದಾಸೋಹಿಗಳೇ ಭಕ್ತರೆಲ್ಲರೂ ಆಗಬೇಕಾದುದು ಅವರ ಕರ್ತವ್ಯ. ಆದುದರಿಂದ ಈ ಧ್ಯೇಯಸಾಧನೆಗೆ ಅನುಕೂಲವಾಗುವಂತೆ ಪ್ರತಿಯೊಬ್ಬನು ಉಳಿದವರೊ

[೧] ಶಿವಾನುಭವ ಸಂಪುಟ ೧೪, ಸಂಚಿಕೆ ೧೧, ಪುಟ ೪೯೦–೫೦೦ ವರೆಗೆ, ದಾಸೋಹತ್ರಯದ ವಿಷಯವಾಗಿ ಬಂದಿರುವ ಲೇಖವನ್ನು ಇಷ್ಟವುಳ್ಳವರು ನೋಡಬಹುದು.

ಡನೆ (ಸಮಾಜದೊಡನೆ) ವ್ಯವಹರಿಸುವದು ಅವಶ್ಯವದೆ. ಅದನ್ನೇ ಇಲ್ಲಿ ವಿವರಿಸುವಾ.

## ಸಮಷ್ಟಿಗುರು.

ಚರ್ಮಚಕ್ಷುವಿಗೆ ಗೋಚರವಾಗುವ ಸ್ಥೂಲ ಆಕಾರವೇ ಗುರು "ಯದ್ದೃಷ್ಟಂ ತನ್ನಷ್ಟಂ" ಎಂದು ಯಾವದನ್ನು ಹೇಳಿರುವರೋ ಅದೇ ಗುರು. ಈ ವಿಶ್ವರೂಪ ಮಹಾಕಾರವೇ ವಿರಾಡ್ಗುರು. ಮನುಜರಲ್ಲಿ ಅವನ ಶರೀರವೂ ಅದಕ್ಕೆ ಸಂಬಂಧಿಸಿದ ಸದಾಚಾರ ಸತ್ಕ್ರಿಯೆಗಳೂ ಗುರುವೆನಿಸಿದಂತೆಯೇ, ಸಮಾಜ ರೂಪಿ ಸಾಮೂಹಿಕ ಶರೀರವೂ ಅದರ ರೀತಿ ನೀತಿ ಆಚಾರಗಳೂ ಸ್ಥೂಲಮಾನದಿಂದ ಸಮಷ್ಟಿಗುರುವೆಂದು ಹೇಳಲ್ಪಡುವವು. ಈ ಅತ್ಯಾವಶ್ಯಕವಿರುವ ನಡೆನುಡಿಗಳು ಸಮಾಜದಲ್ಲಿ ತಕ್ಕಂತೆ ಅಳವಡಬೇಕಾದರೆ, ನಾವು ನೀತಿ ಧರ್ಮವನ್ನು ಎಷ್ಟುಮಾತ್ರವೂ ಅತಿಕ್ರಮಿಸದೆ, ಬಹು ಎಚ್ಚರದಿಂದಲೂ ಧೈರ್ಯದಿಂದಲೂ ಬೆಂಬಳಿಸಬೇಕು. ಈ ಸಮಷ್ಟಿಗುರುಪೂಜೆಯನ್ನು ಕುರಿತು ಪ್ರಮಥಾಗ್ರಗಣ್ಯ ಬಸವಣ್ಣನವರು ಹೇಳಿರುವದೇನಂದರೆ:—

"ಕಳಬೇಡ, ಕೊಲಬೇಡ, ಹುಸಿಯನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ; ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲಸಂಗಮದೇವನನೊಲಿಸುವ ಪರಿ."

ಇಲ್ಲಿ ಅಂತರಂಗ ಶುದ್ಧಿಯೆಂದರೆ ಆತ್ಮೋದ್ಧಾರ, ಬಹಿರಂಗ ಶುದ್ಧಿಯೆಂದರೆ ಸಮಾಜ ರಾಷ್ಟ್ರಾದಿಗಳ ಉದ್ಧಾರವೆಂದು ತಿಳಿಯಬೇಕು. ಕಳವು ಕೊಲೆ ಮೊದಲಾದ ಈ ಗುಣಗಳೆಲ್ಲ ಭವಿಗುಣಗಳು. ಅಂತೇ ಭಕ್ತರೆನಿಸುವವರಿಗೆ ಇವೆಲ್ಲ ಬೇಡವೆಂದು, ಭಕ್ತಿಬಂಡಾರಿ ಬಸವಣ್ಣನವರು ಉಪದೇಶಿಸಿದ್ದಾರೆ. ಈ ವಚನವು ಚಿಕ್ಕದಾಗಿದ್ದರೂ ಬಹು ಅರ್ಥಗರ್ಭಿತವಾಗಿದೆ. ಎಂತೆನೆ:- ಇದರಲ್ಲಿ ಬರೇ ಬಿಡಬೇಕಾದ ಗುಣಗಳನ್ನು ಮಾತ್ರ ಹೇಳಿರುವರು. ಆದರೂ ಅವುಗಳಿಂದ ಸೂಚಿತವಾಗುವ ಹಿಡಿಯಬೇಕಾದ ಗುಣಗಳನ್ನು ಸಹ ಇಲ್ಲಿ ನಾವು ಗಮನಕ್ಕೆ ತರುವದು ಅತ್ಯವಶ್ಯವದೆ. ಕಳಬೇಡವೆಂಬುದರಿಂದ ಕಾಯಕ ಮಾಡೆಂದೂ, ಕೊಲಬೇಡವೆಂಬುದರಿಂದ ದಯಾಪರನಾಗೆಂದೂ, ಹುಸಿಯ ನುಡಿಯಲುಬೇ

ಡೆಂಬುವದರಿಂದ ದಿಟನುಡಿಯೆಂದೂ, ಮುನಿಯಬೇಡೆಂಬುದರಿಂದ ತಾಳ್ಮೆ ಯುಳ್ಳವನಾಗೆಂದೂ, ಅನ್ಯರಿಗೆ ಅಸಹ್ಯಪಡಬೇಡೆಂಬುದರಿಂದ ಪರರ ವಿಷ ಯವಾಗಿ ಸಹ್ಯತೆ (ಸಹನಶೀಲತೆ)ಯುಳ್ಳವನಾಗೆಂದೂ, ತನ್ನ ಬಣ್ಣಿಸಬೇ ಡೆಂಬುದರಿಂದ ತನ್ನನ್ನು ಕೀಳಾಗಿ ಇಲ್ಲವೆ ಭೃತ್ಯನೆಂದು ಭಾವಿಸೆಂದೂ, ಇದಿರಹಳಿಯಲುಬೇಡೆಂಬುದರಿಂದ ಪರರ ಬಗ್ಗೆ ಪ್ರೇಮಾದರಗಳಿರಲೆಂದೂ ಹೇಳಿದಹಾಗಾಯಿತೆಂಬ ಊಹೆಯು ಸಹಜವಾಗಿಯೇ ಆಗುವದು, ಈ ರೀತಿ ಭಾವಿಸಿದರೆ ಈ ಗುಣಗಳೆಲ್ಲ ಧಾರ್ಮಿಕತನದ-ಸಮಾಜ ಧರ್ಮದ-ಮುಖ್ಯ ಲಕ್ಷಣಗಳೆಂಬುದು ಕೆಳಗಿನ ಪದ್ಯಗಳಿಂದ ಗೊತ್ತಾ ಗುವದು.

೧. "ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾಕ್ಷಮಾ ।
ದಾನಂ ಪೂಜಾ ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹಃ ॥"
[ಸಿ. ಶಿ.]

೨. "ಧೃತಿಕ್ಷಮಾಶಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋದಶಕಂ ಧರ್ಮಲಕ್ಷಣಂ ॥"
[ಮ. ಭಾ.]

ಇವನ್ನು ಪಾಲಿಸುವದರಿಂದ ಸಮಾಜ ರಾಷ್ಟ್ರಾದಿಗಳ ಧಾರಣವೂ ಪೋಷಣವೂ ಆಗುವದಲ್ಲದೆ, ಭಕ್ತೋದ್ಧಾರಕ್ಕೆ ಒಳಿತಾಗಿ ಸಹಾಯ ವಾಗುವದು. ಸಮಷ್ಟಿ ಗುರುಲಿಂಗಜಂಗಮದ ಸೇವೆ ಘಟಿಸುವದು. ಅದು ಹೇಗೆಂಬುದು ಈ ವಚನದ ವಿವರಣೆಯಿಂದ ತಾನೇ ವಿದಿತ ವಾಗುವದು.

**ಕಳಬೇಡ:**— ಒಬ್ಬರು ಗಳಿಸಿದುದನ್ನು ಇನ್ನೊಬ್ಬರು ಅಪಹರಿ ಸುವದು ಕಳವೆನಿಸುತ್ತದೆ. ಇದನ್ನು ಯಾರೂ ಸಹಸಾ ಮಾಡಕೂಡದು. ಆದರೂ ದುಡಿಯಲಾರದ ಹೇಡಿಗಳನೇಕರು ಅನ್ಯರು ಗಳಿಸಿದುದನ್ನು ತುಡುಗಿನಿಂದ ಎಬ್ಬಿಸಿಕೊಂಡು ಹೋಗಿ, ತಮ್ಮ ಜೀವನವನ್ನು ಸಾಗಿಸಲಿಕ್ಕೆ ಮೆಚ್ಚಿರುತ್ತಾರೆ. ಇದು ತೀರ ನಿಂದ್ಯ, ಅನ್ಯಾಯ. ಇದರಿಂದ ಸಮಾ ಜದಲ್ಲಿ ಶಾಂತಿಯುಳಿಯದು. ಅದೂ ಅಲ್ಲದೆ ಸಂಪದಭಿವೃದ್ಧಿಗೆ ದೊಡ್ಡ ಆತಂಕವಾಗುವದು. ಇದೇ ಮೇರೆಗೆ ಹಲವರು ವೈಗಳ್ಳತನದಿಂದ ಸಮಾಜದಲ್ಲಿ ಭಿಕ್ಷೆ ಬೇಡಿಕೊಂಡು ತಿಂದುಂಡು ಸುಖಿಸಲಿಕ್ಕೆ ಓಡಾಡು

ತ್ತಾರೆ. ಇದರಂತಹ ಅಸಹ್ಯತೆಯು ಇನ್ನೊಂದಿಲ್ಲ. ಕಳವು ಭಿಕ್ಷೆಗಳೆ ರಡೂ ಅಧೋಗತಿಯ ಹೆದ್ದಾರಿಗಳು. ಭವಿಗಳ ನೀಚಕೃತ್ಯಗಳು. "ಬೇಡು ವವ ಭಕ್ತ (ವೀರಶೈವ) ನಲ್ಲ" ಎಂದು ವಚನ ಶಾಸ್ತ್ರವು ಘಂಟಾಘೋ ಷವಾಗಿ ಸಾರುತ್ತದೆ. ಈ ಮೇರೆಗೆ ಕಳವು ಭಿಕ್ಷೆಗಳು ನಿಷಿದ್ಧವಾದ ಮೇಲೆ ಉಪಜೀವಿಸಲಿಕ್ಕೆ ಕಾಯಕದ ವಿನಾ ಸಾಧನವೇ ಉಳಿಯಲಿಲ್ಲ. ಆದುದರಿಂದ ಲಿಂಗಾಯತರಲ್ಲಿ "ಪ್ರತಿಯೊಬ್ಬನು ಸತ್ಕಾಯಕದಿಂದಲೇ ಜೀವಿಸಬೇಕೆಂ"ದು ಬಲವಾದ ಕಟ್ಟು ಹಾಕಿದ್ದಾರೆ. ಅದನ್ನು ಉಲ್ಲಂ ಘಿಸಲು ಯಾರಿಗೂ ಬರುವಂತಿಲ್ಲ. ಈ ರೀತಿ ಕಾಯಕದಿಂದಲೇ ಸಂಪಾ ದಿಸಿದುದನ್ನು ತಾನೊಬ್ಬನೇ ಉಪಭೋಗಿಸದೆ, ಅದರ ಬಹುಭಾಗ ವನ್ನು ಇಲ್ಲವೆ ಶಕ್ಯವಾದಷ್ಟು "ಸತ್ಪಾತ್ರದಾನದಲ್ಲಿ ಪರೋಪಕಾರ ದಾನಾ ದಿಗಳಲ್ಲಿ ಸವಿಸಬೇಕೆಂ"ದು ಆಜ್ಞಾಪಿಸಿದ್ದಾರೆ. ಅದು ಕೂಡ ಬಿದ್ದರೆ ಭವಿತನಕ್ಕೆ ಎಳೆಯುವದೆಂಬುದೇ ಅವರ ಅಭಿಮತ. ಶ್ರೀ ಬಸವ ಮಹಾತ್ಮರ ಈ ವಚನವನ್ನು ಗಮನಿಸಿರಿ.

"ಹೊನ್ನಿನೊಳಗೊಂದೊರೆಯು, ಸೀರೆಯೊಳಗೊಂದೆಳೆಯು, ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ, ನಿಮ್ಮ ಶರಣರಿಗಲ್ಲದೆ ಮತ್ತೊಂದ ನರಿಯೆ. ಕೂ. ಸ. ದೇವ."

ಅಹಹ! ಇದೆಂತಹ ನಿರ್ಧಾರವು!! ಅವರು ಭಕ್ತಿಭಂಡಾರಿಗಳು. ವೀರಶೈವಾಗ್ರೇಸರರು, ಆದರೂ ನಾವು ವಚನದ ಮರ್ಮವನರಿದು, ಸತ್ಪಾತ್ರದಲ್ಲಿಯೂ ಸತ್ಕಾರ್ಯದಲ್ಲಿಯೂ ನಮ್ಮ ಸಂಪತ್ತಿಯನ್ನು ವೆಚ್ಚ ಮಾಡಬೇಕು. ಆ ಕಾರ್ಯದಲ್ಲಿ ಸಹಸಾ ಅದರ ಅಪವ್ಯಯವಾಗಬಾ ರದು. ನಿಜವಾದ ಆಚರಣೆಯು ಹೀಗಿದ್ದು, ಕಳವು ಮಾಡುವದು ಭಕ್ತರಿಗೆ ಉಚಿತವೇ ? ಗುರುಲಿಂಗ ಜಂಗಮಕ್ಕೆ ತನುಮನ ಧನಗಳನ್ನು ನಿರ್ವಂಚನೆಯಿಂದ ಸಮರ್ಪಿಸುವ ಭಕ್ತರ ಕಾರ್ಯವೇ ಅದು ? ಸಹಸಾ ಅಲ್ಲ! ಕಳ್ಳತನದ ಇನ್ನೂ ಕೆಲವು ಪರ್ಯಾಯಗಳಿವೆ. ಲಂಚಬೊಕ್ಕ ಸತನ, ಒಬ್ಬರಲ್ಲಿ ಕಡ ಸಾಲ ಒಯ್ದುದನ್ನು ತಿರುಗಿ ಮುಟ್ಟಿಸದಿರೋಣ, ಒಬ್ಬರು ತಂದಿಟ್ಟುದನ್ನು ನುಂಗಿಬಿಡೋಣ, ಇತ್ಯಾದಿಗಳು ಪರಧನಾಪ ಹರಣದಲ್ಲಿಯೇ ಬರುವವು. ಆದುದರಿಂದ ಭಕ್ತರು ಬಹು ಎಚ್ಚರದಿಂ ದಿರಬೇಕು. ಇದಕ್ಕೂ ಮುಂದೆ ಹೋಗಿ, ಬಟ್ಟೆಯಲ್ಲಿ ಹೆರವರ ಯಾವ ದಾದರೊಂದು ವಸ್ತುವು ಬಿದ್ದಿದ್ದರೆ ಅದನ್ನು ತಕ್ಕೊಳ್ಳುವದು ಸಹ

ಕಳವೇ ಆಗುವದೆಂದೂ, ತನಗೆ ಸದ್ಯಕ್ಕೆ ಬೇಕಾಗುವದಕ್ಕಿಂತ ಹೆಚ್ಚಾಗಿ ಪದಾರ್ಥ ಹಣ ಮುಂತಾದವನ್ನು ಸಂಗ್ರಹಿಸುವದು ಸಹ ತುಡುಗೆನಿಸುವದೆಂದೂ, ಅತಿ ಸೂಕ್ಷ್ಮರೀತಿಯಿಂದ ವಿಚಾರಿಸಿ ಹೇಳಿದ್ದಾರೆ. (ಇಲ್ಲಿ ಗಳಿಸುವದೇ ಕೇವಲ ತಪ್ಪೆಂದು ಯಾರೂ ಭಾವಿಸಕೂಡದು. ವಹಿಸಿದ ಕಾಯಕದಲ್ಲಿ ಪ್ರಯಾಸಪಟ್ಟು ದುಡಿದು ಬೇಕಾದಷ್ಟು ಸಂಗ್ರಹಿಸಬಹುದು. ಆದರೆ ಹಾಗೆ ಸಂಗ್ರಹಿಸಿದುದನ್ನು ಗುರುಲಿಂಗಜಂಗಮಕ್ಕೆ ಅರ್ಥಾತ್ ಸಮಾಜಕ್ಕೆ ನಿರ್ವಂಚನೆಯಿಂದ ಸಲ್ಲಿಸಲು ಹಿಂಜರಿಯಬಾರದೆಂಬುದೇ ಅದರ ಅರ್ಥ.) ಇದರಂತೆಯೇ ಯೋಗ್ಯ ಕಾರಣವಿಲ್ಲದೆ ಸುಮ್ಮಸುಮ್ಮನೆ ಪರರು ಸ್ವಸಂತೋಷದಿಂದ ಏನಾದರೂ ಕೊಡಬಂದರೆ ಅದನ್ನು ಸ್ವೀಕರಿಸುವದು ಸಹ ಶಿವಭಕ್ತರಿಗೆ ಮಾನ್ಯವಿಲ್ಲ. ಅನಿವಾರ್ಯವೆಂದು ಹಾಗೆ ತಕ್ಕೊಂಡರೆ, ಹೊತ್ತು ಸಾಧಿಸಿ ಒಂದಿಲ್ಲೊಂದು ರೀತಿಯಿಂದ ಅವರಿಗೆ ಮುಟ್ಟಿಸಿಯೇ ಸಂತೃಪ್ತರಾಗಬೇಕು. ಇದೆಲ್ಲ ಆಲೋಚಿಸಿದರೆ ಭಕ್ತರು ಯಾವಾಗಲೂ ಸತ್ಕಾಯಕದಿಂದಲೇ ಬಾಳಬೇಕೆಂತಲೂ, ಇನ್ನೊಬ್ಬರ ರಿಣದಲ್ಲಿ ಸಹಸಾ ಸಿಕ್ಕಬಾರದೆಂದೂ ಒಡೆದು ಕಾಣುತ್ತದೆ. ಪರಧನದ ಬಗ್ಗೆ ವಚನಕಾರರು ಏನಂದಿರುವರೆಂಬದನ್ನು ಕೆಳಗಿನ ವಚನಗಳಲ್ಲಿ ನೋಡಿರಿ.

೧. "ತೊರೆಯ ಮೀವ ಅಣ್ಣಗಳಿರಾ, ತೊರೆಯಮೀವ ಸ್ವಾಮಿಗಳಿರಾ, ತೊರೆಯಿಂಭೋ ತೊರೆಯಿಂಭೋ ಪರಧನದ ಆಮಿಷವ ತೊರೆಯಿಂಭೋ! ಪರನಾರಿಯ ಸಂಗವ ತೊರೆಯಿಂಭೋ! ಇವ ತೊರೆಯದೆ ಹೋಗಿ, ತೊರೆಯ ಮಿಂದಡೆ ಬರಿದೊರೆ ಹೋಹುದು ಕೂ. ಸಂ. ದೇವ."

೨. "ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದರೆ, ನಾನು ಕೈಯ್ಯಲ್ಲಿ ಎತ್ತಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ......ಶಂಭು ಜಕ್ಕೇಶ್ವರ"

**ಕೊಲಬೇಡ** – ಜೀವಘಾತವೆನಿಸುವದೇ ಕೊಲೆಯು. ಪರಮಾತ್ಮನೇ ಎಲ್ಲರ ಜೀವಗಳಲ್ಲಿ ಅಂತರಾತ್ಮನಾಗಿರುವದರಿಂದ, ಯಾವ ಪ್ರಾಣಿಯನ್ನು ಕೊಲ್ಲುವದಾದರೂ ಹೊಲ್ಲವೇ ಸರಿ. ಕೊಲ್ಲುವದಂತೂ ಒತ್ತಟ್ಟಿಗಿರಲಿ, ಕಾಡಿ ಪರಿಪರಿಯಿಂದ ಪೀಡಿಸುವದಾದರೂ ಮಾನಸಿಕ

ಕೊಲೆಯೇ ಆಗುವದು. ಇದು ಶಾರೀರಿಕ ಕೊಲೆಗಿಂತಲೂ ಒಂದು ರೀತಿಯಿಂದ ಬಹಳೇ ಕೆಡಕು. ಯಾಕಂದರೆ ಜೀವವು ಇದರಿಂದ ಆಜನ್ಮ ವಾಗಿ ಮರುಗುತ್ತಲೇ ಇರಬೇಕಾಗುವದು. "ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ" ಎಂದು ಹೇಳಿರುವದರಿಂದ, ಪರದಾರ ಪರ ದ್ರವ್ಯಗಳನ್ನು ಬಯಸಿ ಅವಿಸ್ವಾಸ ಅಪ್ರಾಮಾಣಿಕತನದಿಂದ ವರ್ತಿಸು ವದೂ, ಬಿರುನುಡಿ ಮುಂತಾದವುಗಳ ಯೋಗದಿಂದ ಅನ್ಯರ ಮನಸ್ಸನ್ನು ನೋಯಿಸುವದೂ ಕೂಡ ಹಿಂಸೆಯಲ್ಲಿಯೇ ಬರುವವು. ಇಂತಹ ಕಠೋರ ವೃತ್ತಿಗೆ ಸ್ವಾರ್ಥಪರಾಯಣತೆಯೇ ಕಾರಣವು. ಪರಮಾತ್ಮ ನಲ್ಲಿ ಐಕ್ಯಸಾಧಿಸಬೇಕೆಂಬುವ ಲಿಂಗಾಂಗಿಗಳಿಗೆ ಸ್ವಾರ್ಥವೆಲ್ಲಿಯದು, ಆಕಾರಣ ಭಕ್ತರು ಯಾವಾಗಲೂ ಅಹಿಂಸೆಯನ್ನೇ ಪಾಲಿಸಬೇಕು. ಈ ಬಗ್ಗೆ ವಚನ ಪ್ರಮಾಣಗಳುಃ--

೧. "ಕೊಲ್ಲೆನಯ್ಯಾ ಪ್ರಾಣಿಗಳ, ಮೆಲ್ಲೆನಯ್ಯಾ ಬಾಯಿಚ್ಛೆಗೆ, ಒಲ್ಲೆನಯ್ಯಾ ಪರಸತಿಯರ ಸಂಗವ, ಬಲ್ಲೆನಯ್ಯಾ ಮುಂದೆ ತೊಡಕುಂಟೆಂಬುದ, ಬಳ್ಳದ ಬಾಯಂತೆ ಒಂದೆಮನವ ಮಾಡಿ ನಿಲ್ಲೆಂದು ನಿಲಿಸಯ್ಯ ಕೂ. ಸಂ. ದೇವ."

೨. "ಪರಧನವನೊಲ್ಲಪ್ಪುದೇ ವ್ರತ, ಪರಸ್ತ್ರೀಯ ಕೂಡದಿಪ್ಪುದೇ ಶೀಲ, ಸರ್ವಜೀವವ ಕೊಲ್ಲದಿಪ್ಪುದೇ ನೇಮ, ತಥ್ಯಮಿಥ್ಯವ ತಿಳಿದಿಪ್ಪುದೇ ನಿತ್ಯ ನೇಮ; ಇದು ಈಶಾನ್ಯ ಮೂರ್ತಿ ಮಹಾ ಲಿಂಗಕ್ಕೆ ಸಂದೇಹವಿಲ್ಲದ ವ್ರತ."

೩. "ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ......ಕೂ. ಸಂ. ದೇವ."

( ಮುಂದುವರಿಯುವದು. )

# ಆತ್ಮನಿವೇದನೆಯು.

ಶಿವಾನುಭವ ಪತ್ರಿಕೆಯನ್ನು ನಾವು ಪ್ರಾರಂಭಿಸಿ ಇಂದಿಗೆ ೧೮ ವರ್ಷಗಳಾದವು. ಆದರ ೧೯ನೆಯ ವರ್ಷವು ಈಗಿನ ಸಂಚಿಕೆಯಿಂದ ಪ್ರಾರಂಭವಾಗುತ್ತದೆ. ಈ ದೀರ್ಘ ಅವಧಿಯಲ್ಲಿ ಇದು ಯಾವ ವರ್ಷವೂ ನಿಲ್ಲಿಸಲ್ಪಟ್ಟಿಲ್ಲ. ಈವರೆಗೆ ಅದು ತನ್ನ ಉದ್ದೇಶಕ್ಕನುಸರಿಸಿಯೇ ಸತತವಾಗಿ ಕಾರ್ಯಮಾಡುತ್ತ ಬಂದಿದೆ. ಇದು ವಾಚಕರ ನಿದರ್ಶನಕ್ಕೆ ಬಂದಿರಬಹುದು. ಈಚೆಗೆ ಬಹುಜನಸಮಾಜದಲ್ಲಿ ಅದರ ವಿಷಯವಾಗಿ ಆದರ ಬುದ್ಧಿಯು ಹೆಚ್ಚುತ್ತಲಿದ್ದುದು ನಮಗೆ ಉತ್ಸಾಹಕರವಾಗಿರುತ್ತಿದೆ. ಪತ್ರಿಕೆಯ ಮೂಲೋದ್ದೇಶಕ್ಕನುಸರಿಸಿ ಅದು ಮುಂದೆಯೂ ಪ್ರಕಟವಾಗುತ್ತ ಹೋಗುವದು. ಇದರಲ್ಲಿ ವಾಚಕರು ಅದಕ್ಕೆ ತಮ್ಮ ಬೆಂಬಲವನ್ನು ನೀಡುವರೆಂದು ನಾವು ಅವರಿಗೆ ನಮ್ರಪೂರ್ವಕವಾಗಿ ವಿನಂತಿಯನ್ನು ಮಾಡಿಕೊಳ್ಳುತ್ತೇವೆ.

ಕಾಗದದ ಕೊರತೆಗೋಸ್ಕರ ಅದಕ್ಕೆ ಹಿಂದಿನ ವರ್ಷ ಅತ್ಯಂತ ಬಿಕ್ಕಟ್ಟಿನ ಪ್ರಸಂಗವು ಒದಗಿತು. ಆಗ ನಮ್ಮ ವಿನಂತಿಯನ್ನು ಮನ್ನಿಸಿ ನಮ್ಮ ಚಂದಾದಾರರು, ಅವರಲ್ಲಿ ಮುಖ್ಯವಾಗಿ ಬೆಳಗಾವ ಜಿಲ್ಲೆಯಲ್ಲಿಯವರು ಅದಕ್ಕೆ ವಿಶೇಷ ಸಹಾಯ ಮಾಡಿದರು. ಆದರಿಂದ ಅದು ಬದುಕಿನಿಂತಿತು. ಹೀಗೆ ಸಹಾಯ ಮಾಡಿದ ಮಹನೀಯರ ಹೆಸರುಗಳನ್ನು ನಾವು ಕಾಲಕಾಲಕ್ಕೆ ಪತ್ರಿಕೆಯಲ್ಲಿ ಪ್ರಕಟಪಡಿಸುತ್ತ ಬಂದಿದ್ದೇವೆ. ಅವರಿಗೆ ನಮ್ಮ ಕೃತಜ್ಞತೆಯನ್ನು ಅರ್ಪಿಸುತ್ತೇವೆ. ಆದರೆ ಈ ಕಠಿಣ ಪರಿಸ್ಥಿತಿಯು ಈ ವರ್ಷವಾದರೂ ಕೂಡ ಹಿಮ್ಮೆಟ್ಟಿಲ್ಲ. ಅದು ಹೆಚ್ಚುತ್ತಲೇ ಇದೆ. ಆದ್ದರಿಂದ ನಮ್ಮ ವಾಚಕರು ಈ ವರ್ಷವಾದರೂ ತಮ್ಮ ಸಹಾಯವನ್ನು ಎಂದಿನಂತೆ ನೀಡುವರೆಂದು ನಾವು ಅವರಿಗೆ ವಿನಂತಿಮಾಡಿಕೊಳ್ಳುತ್ತೇವೆ.

ಶಿವಾನುಭವ ಪತ್ರಿಕೆಯು ಕೇವಲ ಸಂಶೋಧನೆಯ ಕಾರ್ಯಕ್ಕೋಸ್ಕರ ಉಂಟಾದದ್ದು ಇದೆ. ಈ ದೃಷ್ಟಿಯಿಂದ ಬರೆದ ಲೇಖಗಳಿಗೆಲ್ಲ ನಾವು ಅದರಲ್ಲಿ ಇಂಬುಗೊಡುತ್ತ ಬಂದಿದ್ದೇವೆ. ಆದರೆ ಅವುಗಳಲ್ಲಿ ಪ್ರಕಟವಾದ ಲೇಖಗಳಲ್ಲಿಯ ಅಭಿಪ್ರಾಯಗಳು ಲೇಖಕರವೇ ಹೊರ್ತು ಅವು ಪತ್ರಿಕಾಕಾರರವಲ್ಲವೆಂದು ಇಲ್ಲಿ ನಾವು ಹೇಳಬಯಸು

ತ್ತೇವೆ. ಹೀಗೆ ಅವರು ತಿಳಿದಲ್ಲಿ ಅನೇಕರು ಪತ್ರಿಕೆಯ ವಿಷಯವಾಗಿ ತಾಳಿರುವ ಆಕ್ಷೇಪಗಳು ದೂರಾಗುವವೆಂದು ನಂಬಿದ್ದೇವೆ.

ಇನ್ನು ಮುಂದೆ ನಾವು ವೀರಶೈವೇತಿಹಾಸದ ಬಗ್ಗೆ ಲೇಖಗಳನ್ನು ಹಿಂದಿನಂತೆಯೇ ಮುಂದುವರಿಸುವೆವು. ಅವುಗಳ ತರುವಾಯ ಧಾರ್ಮಿಕೇತಿಹಾಸ ವಿಷಯವನ್ನೂ ಕೈಕೊಳ್ಳಲು ಅಪೇಕ್ಷಿಸಿದ್ದೇವೆ. ಈ ನಮ್ಮ ಪ್ರಯತ್ನದಲ್ಲಿ ಲೇಖಕರು ನಮಗೆ ಎಂದಿನಂತೆ ಸಹಾಯವನು ನೀಡುತ್ತಿರಬೇಕೆಂದು ಅವರಿಗೆ ನಮ್ಮ ನಮ್ರ ವಿನಂತಿ ಇದೆ.

## ಶಿವಾನುಭವ ಪತ್ರಿಕೆಗೆ ಸಹಾಯ.

ಶ್ರೀಮನ್ನಿರಂಜನ ಬಸವದೇವರು ಪುಟ್ಟಯ್ಯನಮಠ ಮು. ರಾಣೀಬಿನ್ನೂರು ಇವರು ರಾವಬಹಾದ್ದೂರ ಪಿ. ಜಿ. ಹಳಕಟ್ಟಿಯವರು ೧೧-೧೦-೪೪ ನೇ ದಿವಸ ರಾಣೀಬಿನ್ನೂರಿಗೆ ಜಿಲ್ಲಾ ಸಾಹಿತ್ಯ ಪರಿಷತ್ತು ಧಾರವಾಡ ಇದಕ್ಕೋಸ್ಕರ ಆಗಮಿಸಿದಾಗ್ಗೆ ಶಿವಾನುಭವ ಪತ್ರಿಕೆಯ ಸಹಾಯಕ್ಕೋಸ್ಕರ ೨೫ ರೂಪಾಯಿಗಳನ್ನು ಅವರಿಗೆ ದಯಪಾಲಿಸಿದರು. ಇದಕ್ಕೋಸ್ಕರ ಶ್ರೀ ಸ್ವಾಮಿಗಳವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ. ಇದೇ ರೀತಿಯಾಗಿ ನಮ್ಮ ವಾಚಕರು ಸಹಾಯವನ್ನು ನೀಡಬೇಕೆಂದು ಅವರಿಗೆ ನಮ್ಮ ವಿನಂತಿ ಇದೆ.

## ರಾ. ಬ. ಹಳಕಟ್ಟಿಯವರಿಗೆ ಮಾನಪತ್ರ.

೧೨-೧೦-೧೯೪೪ ನೇ ದಿವಸ ರಾಣೀಬಿನ್ನೂರಿನ ಮಹಾ ಜನರು ಪ್ರೊ॥ ವ್ಹಿ. ಕೆ. ಗೋಕಾಕ. ಇವರ ಅಧ್ಯಕ್ಷತೆಯಲ್ಲಿ ಶ್ರೀಮನ್ನಿರಂಜನ ಬಸವದೇವರು ಪುಟ್ಟಯ್ಯನಮಠ ಇವರ ಮಠದಲ್ಲಿ ಸಭೆಸೇರಿ ರಾ॥ ಬ॥ ಹಳಕಟ್ಟಿಯವರು ಶೈಕ್ಷಣಿಕ, ವಾಙ್ಮಯಾತ್ಮಕ ಮೊದಲಾದ ಕ್ಷೇತ್ರಗಳಲ್ಲಿ ವಿಶೇಷ ಪರಿಶ್ರಮ ಪಟ್ಟದ್ದಕ್ಕೋಸ್ಕರ ಅವರಿಗೆ ಮಾನಪತ್ರವನ್ನು ಸುಂದರವಾದ ಬೆಳ್ಳಿಯ ಕರಂಡಕದಲ್ಲಿ ಅರ್ಪಿಸಿದರು. ಆ ಕಾಲದಲ್ಲಿ ಸಾಹಿತ್ಯ ಪರಿಷತ್ತಿಗೆ ಆಗಮಿಸಿದ ಪ್ರತಿನಿಧಿಗಳೂ ಧಾರವಾಡ ಶ್ರೀಮನ್ನಿರಂಜನ ಮೃತ್ಯುಂಜಯ ಸ್ವಾಮಿಗಳೂ ದಾವಣಗೆರೆಯ ವಿರಕ್ತಮಠದ ಶ್ರೀ ಸಿದ್ಧವೀರ ಸ್ವಾಮಿಗಳೂ ಮೊದಲಾದವರು ಆಗಮಿಸಿದ್ದರು. ಕಾರ್ಯಕ್ರಮಗಳು ಅತ್ಯಂತ ವಿಜೃಂಭಣೆಯಿಂದ ಜರಗಿದವು.

---

ಪುರ ಹೀಗೆ ಅನೇಕ ಮಹತ್ವದ ಗ್ರಾಮಗಳಲ್ಲಿ ವೀರಶೈವ ಮಠಗಳನ್ನು ಸ್ಥಾಪಿಸಿದನು. ಈ ಪ್ರಕಾರ ಬಸವಪ್ಪನಾಯಕನು ೧೫ ವರ್ಷಗಳ ವರೆಗೆ ಉತ್ತಮ ರೀತಿಯಿಂದ ರಾಜ್ಯಪಾಲನ ಮಾಡಿ ೧೭೫೫ ರಲ್ಲಿ ಕಾಲವಾದನು.

**ಚೆನ್ನಬಸವಪ್ಪ:** ಬಸವಪ್ಪನಾಯಕನ ತರುವಾಯ ಅವನ ಮಗನಾದ ಚೆನ್ನಬಸವಪ್ಪನಾಯಕನು ರಾಜ್ಯವಾಳಹತ್ತಿದನು. ಈತನು ೪ ವರ್ಷಗಳ ವರೆಗೆ ಮಾತ್ರ ರಾಜ್ಯವಾಳಿದನು

**ಸೋಮಶೇಖರ ನಾಯಕ:** ಚನ್ನಬಸವಪ್ಪನಾಯಕನ ತರುವಾಯ ಬಸವಪ್ಪನಾಯಕನ ಹೆಂಡತಿಯಾದ ಚೆನ್ನವೀರಮ್ಮಾಜಿಯು ಸೋಮಶೇಖರ ನಾಯಕನೆಂಬವನನ್ನು ದತ್ತಕ ತೆಗೆದುಕೊಂಡಳು. ಅವನು ೧೭೫೭ ರಿಂದ ೧೭೬೩ ರ ವರೆಗೆ ಅಂದರೆ ಕೆಳದಿಯ ರಾಜ್ಯವನ್ನು ಹೈದರನಾಯಕನು ತೆಗೆದುಕೊಳ್ಳುವ ವರೆಗೆ ರಾಜ್ಯವಾಳಿದನು. ಈ ಎರಡೂ ಆಳಿಕೆಗಳಲ್ಲಿ ಉಭಯ ಅರಸರು ಚಿಕ್ಕವರಿದ್ದ ಕಾರಣ ಚೆನ್ನವೀರಮ್ಮಾಜಿಯೇ ರಾಜ್ಯಭಾರವನ್ನು ನಡಿಸುತ್ತಾ ಬಂದಳು.

ಚೆನ್ನವೀರಮ್ಮನು ರಾಜ್ಯಭಾರ ಕಾರ್ಯದಲ್ಲಿ ನಿಪುಣಳೂ ಧೈರ್ಯಸ್ಥಳೂ ಆಗಿದ್ದಳು. ತನ್ನ ಮಗನಾದ ಚೆನ್ನಬಸವಪ್ಪನ ಆಳಿಕೆಯಲ್ಲಿಯೂ ಸೋಮಶೇಖರನ ಆಳಿಕೆಯಲ್ಲಿಯೂ ಮರಾಠರ ಉಪಟಳವು ಬಹಳ ಹೆಚ್ಚಾಯಿತು. ಅವರು ಈ ಕಾಲದಲ್ಲಿ ಕರ್ನಾಟಕ ರಾಜ್ಯದಲ್ಲಿ ಆಗಿಂದಾಗ್ಗೆ ಅಭಿಯೋಗ ಮಾಡುತ್ತಾ ಬಂದರು. ಚೆನ್ನಬಸವಪ್ಪನ ಆಳಿಕೆಯಲ್ಲಿ ಮಹಾದಾಜಿ ಪುರಂಧರೆ ಎಂಬವನು ಕೆಳದಿಯ ರಾಜ್ಯವನ್ನು ಹೊಕ್ಕು ರಾಜಧಾನಿಗೆ ಮುತ್ತಿಗೆ ಹಾಕಿದನು. ಆದರೆ ಅವರಲ್ಲಿ ಅವನು ಯಶಸ್ಸನ್ನು ಹೊಂದದೆ ಹಿಂದಿರುಗಿ ಹೋಗಬೇಕಾಯಿತು. ಮುಂದೆ ಕೆಲವು ವರ್ಷಗಳ ಮೇಲೆ ಪಟವರ್ಧನರ ವಂಶಜನಾದ ಗೋಪಾಳರಾಯನು ರಾಜ್ಯವನ್ನು ಅಭಿಯೋಗಿಸಲು ಅವನಿಗೆ ವೀರಮ್ಮಾಜಿಯು ಹೇರಳ ಹಣವನ್ನು ಕೊಟ್ಟು ಹಿಂದಿರುಗಿಸಿದಳು. ಕೆಳದಿಯ ರಾಜ್ಯವು ಶ್ರೀಮಂತಿಕೆಯಲ್ಲಿ ಬಹಳ ಹೆಸರಾಗಿದ್ದುದರಿಂದ ಅದನ್ನು ಅಭಿಯೋಗಿಸಿ ವ್ಯಾಪಾರದಲ್ಲಿ ಹೆಸರಾದ ಅಲ್ಲಿಯ ಗ್ರಾಮಗಳನ್ನು ಸುಲಿಯಲು ನೆರೆ ರಾಜರು ಬಹಳ ಹವಣಿಸುತ್ತಿದ್ದರು. ಆದರೆ ರಾಜ್ಯವು ಬಿಕ್ಕಟ್ಟಿನ ಅರಣ್ಯ ಪ್ರದೇಶದಲ್ಲಿ ಇದ್ದುದರಿಂದ ಅದನ್ನು ಕೈವಶ ಮಾಡಿಕೊಳ್ಳುವದು ಅವರಿಗೆ ಬಹಳ ದುಸ್ತರವಾಗುತ್ತಿತ್ತು. ಇಂಥ ಸಮಯದಲ್ಲಿ ಅವರಿಗೆ ಕೆಲವು

ಕಪ್ಪ ಹಣವು ದೊರೆತ ಕೂಡಲೇ ಅವರು ತೆರಳಿ ಹೋಗುತ್ತಿದ್ದರು. ಆದರೆ ಪಶ್ಚಿಮ ಕರಾವಳಿ ಪ್ರದೇಶದಲ್ಲಿ ಕೆಳದಿಯ ರಾಜರು ಮರಾಟರ ಅಥವಾ ಪೋರ್ತುಗೀಜರ ಹಾವಳಿಗಳನ್ನು ಎಷ್ಟು ಮಾತ್ರವೂ ನಡೆಯ ಗೊಡುತ್ತಿದ್ದಿಲ್ಲ. ಇತ್ತಕಡೆಗೆ ಸೋಮಶೇಖರ ನಾಯಕನ ಕಾಲದಲ್ಲಿ ಪಶ್ಚಿಮ ತೀರದಲ್ಲಿಯ ಪ್ರದೇಶವನ್ನು ಮರಾಟರು ಸೂರೆ ಮಾಡಬೇಕೆಂದು ಅದನ್ನು ಅಭಿಯೋಗಿಸಲು ಕೆಳದಿಯ ಸೈನಿಕರು ಅವರನ್ನು ಸೋಲಿಸಿ ದರು ಮತ್ತು ಮಿಡಿಜೆ ಎಂಬ ಕೋಟೆಯನ್ನು ತಮ್ಮ ಕೈವಶ ಮಾಡಿ ಕೊಂಡರು. ಈ ಪ್ರಕಾರ ಕೆಳದಿಯ ಅರಸರು ತಮ್ಮ ಬಂದರ ಪ್ರದೇಶ ಗಳನ್ನು ಸುರಕ್ಷಿತವಾಗಿಟ್ಟುಕೊಂಡು ತಮ್ಮ ವ್ಯಾಪಾರಕ್ಕೆ ಹಾನಿಯ ನ್ನುಂಟುಮಾಡಗೊಡುತ್ತಿದ್ದಿಲ್ಲ.

ಚೆನ್ನವೀರಮ್ಮಾಜಿಯು ಈ ಪ್ರಕಾರ ಬಹಳ ಸಾಮರ್ಥ್ಯದಿಂದ ತನ್ನ ರಾಜ್ಯಭಾರವನ್ನು ನಡಿಸುತ್ತಾ ಬಂದಳು. ಅವಳು ಜಾಣಳೂ ಧೈರ್ಯಸ್ಥಳೂ ಇದ್ದದರಿಂದ ರಾಜ್ಯದಲ್ಲಿ ಎಷ್ಟು ಮಾತ್ರವೂ ಅಂತಸ್ಥ ಕಲಹಗಳು ಉತ್ಪನ್ನವಾಗದೆ ಸುಮಾರು ೧೦ ವರ್ಷ ಉತ್ತಮ ರೀತಿ ಯಿಂದ ರಾಜ್ಯಭಾರ ನಡಿಸಿದಳು. ಅವಳು ತನ್ನ ರಾಜ್ಯದ ಪೂರ್ವದ ಪರಂಪರೆಯ ಪ್ರಕಾರ ಅತ್ಯಂತ ಧಾರ್ಮಿಕ ಬುದ್ಧಿಯುವಳೂ ಆಗಿದ್ದಳು. ಚೆನ್ನಬಸವಪ್ಪನಾಯಕನ ಆಡಳಿತೆಯ ಕಾಲದಲ್ಲಿ ಅನೇಕ ವೀರಶೈವ ಮಠಗಳಿಗೆ ದೊಡ್ಡ ದೇಣಿಗೆಗಳು ಅವಳಿಂದ ದೊರೆತದ್ದು ಕಂಡು ಬರುತ್ತದೆ. ಅನೇಕ ದೇವಾಲಯಗಳಿಗೆ ಸ್ವಾಸ್ಥೆಗಳು ದೊರೆತಿವೆ. ಚೆನ್ನವೀರಮ್ಮಾಜಿಯು ಶೃಂಗೇರಿಯ ಸ್ವಾಮಿಗಳನ್ನು ಬಹಳವಾಗಿ ಮನ್ನಿಸಿ ಅವರ ಸಾಲವನ್ನು ತೀರಿಸಿ ಬಿಟ್ಟಳು. ಅವಳು ಈ ಮಠಕ್ಕೆ ಭೂಸ್ವಾಸ್ಥೆಯನ್ನು ದಾನವಾಗಿ ಕೊಟ್ಟಳು. ಈ ಪ್ರಕಾರ ಚೆನ್ನವೀರಮ್ಮಾಜಿಯು ಅತ್ಯುತ್ತಮ ರೀತಿಯಿಂದ ರಾಜ್ಯಭಾರ ನಡಿಸುತ್ತ ಇರಲಾಗಿ ಬಲಾಢ್ಯನಾದ ಹೈದರ ನಾಯಕನು ದಾಳಿಯು ಕೆಳದಿಯ ರಾಜ್ಯದ ಮೇಲೆ ಉಂಟಾಯಿತು.

## ಹೈದರಲ್ಲಿಯ ದಾಳಿಯು.

ಹೈದರ ಅಲ್ಲಿಯು ೧೭೬೧ ರಲ್ಲಿ ಮೈಸೂರು ರಾಜನ ಅಧಿಕಾರಗಳ ನ್ನೆಲ್ಲ ತಾನೇ ಆಕ್ರಮಿಸಿಕೊಂಡು ರಾಜ್ಯವಾಳಹತ್ತಿದ್ದನು. ಮುಂದೆ ಅವನು ಶ್ರೀರಂಗಪಟ್ಟಣ ಬೆಂಗಳೂರು ನಗರಗಳನ್ನು ಆಕ್ರಮಿಸಿ

ಮೈಸೂರು ಪ್ರಾಂತದ ಪೂರ್ವಭಾಗವನ್ನು ತನ್ನ ಕೈವಶ ಮಾಡಿ ಕೊಂಡನು. ಆ ಮೇಲೆ ಅವನು ಉತ್ತರಕ್ಕೆ ಹೊರಳಿ, ಹೊಸಕೋಟೆ, ದೊಡ್ಡ ಬಳ್ಳಾಪುರ ಇವುಗಳನ್ನು ತೆಗೆದುಕೊಂಡು ಚಿಕ್ಕ ಬಳ್ಳಾಪುರ, ಸೀರ್‍ಯ, ಪೆನುಕೊಂಡೆ ಮತ್ತು ಮಡಕಸಿರಾ ಈ ಪಟ್ಟಣಗಳನ್ನು ಕೈವಶ ಮಾಡಿಕೊಂಡನು. ಹೀಗೆ ಹೈದರ ಅಲ್ಲಿಯು ದೇಶವಲ್ಲಿ ಬಲಾಢ್ಯನಾಗುತ್ತ ಬರಲು, ರಾಯದುರ್ಗ ಮತ್ತು ಹರಪನಹಳ್ಳಿಯ ಪಾಳ್ಯಗಾರರು ಅವನ ಮೊರೆಹೊಕ್ಕರು. ಮುಂದೆ ಅವನು ಚಿತ್ರಕಲ್ಲದುರ್ಗದ ಪಾಳ್ಯ ಗಾರನನ್ನು ಕೆಣಕಲು ಅವನೂ ಹೈದರನಿಗೆ ಶರಣಾಗತನಾದನು. ಹೀಗೆ ಹೈದರಲ್ಲಿಯು ಮೈಸೂರು ದೇಶದ ಬಹು ಭಾಗವನ್ನು ಆಕ್ರಮಿಸಿದ ಬಳಿಕ ಬೆದನೂರಿನ ರಾಜ್ಯದ ಒಳಹೊಕ್ಕನು. ಈ ಕಾಲವಲ್ಲಿ ಇತ್ತ ಕಡೆಯ ಚಿಕ್ಕ ಚಿಕ್ಕ ಪಾಳ್ಯಗಾರರು ಅವನನ್ನು ತಡೆಯದೆ ಹೋದರು. ಅವನ ದಂಡಾಳುಗಳೂ ಸಂಖ್ಯೆಯಲ್ಲಿ ಹೆಚ್ಚುತ್ತ ಬಂದರು. ಅವನು ಬೆದನೂರು ರಾಜ್ಯವನ್ನು ಅಭಿಯೋಗಿಸಲು ಅದಕ್ಕೆ ಹಿಂದೆ ಎಂದೂ ಒದಗದಂಥ ಒಂದು ಬಿಕ್ಕಟ್ಟಿನ ಸಮಯವು ಪ್ರಾಪ್ತವಾಯಿತು. ಈ ಕಾಲದಲ್ಲಿ ವೀರಮ್ಮಾಜಿಯು ಈ ಶತ್ರುವನ್ನು ತಡೆಯುವದು ಅಸಾಧ್ಯ ವೆಂದು ಎಣಿಸಿ, ಅವನಿಗೆ ಬಹು ಧನವನ್ನು ಕೊಟ್ಟು ಅವನನ್ನು ಹಿಂದಿರುಗಿಸಲು ಬಹಳ ಪ್ರಯತ್ನಿಸಿದಳು. ಆದರೆ ಅದು ನಿಷ್ಫಲವಾ ಯಿತು. ಹೈದರಲ್ಲಿಯು ಕುಮುಸಿಗೆ ಬಂದಾಗ್ಗೆ ಬೆದನೂರಿನ ಅರಸರು ತಮ್ಮ ಒಬ್ಬ ಹಿಂದಿನ ಮಂತ್ರಿಯನ್ನು ಅಲ್ಲಿ ಸೆರೆ ಇಟ್ಟಿದ್ದು ಇವನು ಹೈದರಲ್ಲಿಯನ್ನು ಕಂಡು, ಬಿದನೂರು ರಾಜ್ಯದ ಅಂತಸ್ಥ ಸ್ಥಿತಿ, ಅಲ್ಲಿದ್ದ ವಿಪುಲ ಧನಕನಕಗಳು, ರಾಜಧಾನಿಯ ರಕ್ಷಣೆಯ ವ್ಯವಸ್ಥೆ ಇವುಗಳ ನ್ನೆಲ್ಲ ತಿಳುಹಲು, ಹೈದರಲ್ಲಿಯು ಇಡೀ ರಾಜ್ಯವನ್ನು ತನ್ನ ಕೈವಶ ಮಾಡಿಕೊಳ್ಳಬೇಕೆಂದು ಬಗೆದನು. ಆದುದರಿಂದ ರಾಣಿಯು ಎಷ್ಟು ಧನವನ್ನು ಕೊಡಲು ಮುಂದುವರಿದರೂ ಅದನ್ನು ಹೈದರಲ್ಲಿಯು ನಿರಾಕರಿಸಿ, ರಾಜ್ಯದ ಒಳಹೊಕ್ಕು ರಾಜಧಾನಿಯ ಇದಿರಿಗೆ ಬಂದು ಅದನ್ನು ಮುತ್ತಿದನು. ಆದರೆ ಪಟ್ಟಣವನ್ನು ಪ್ರವೇಶ ಮಾಡಲು ಒಂದು ಅನುಕೂಲ ಕಳ್ಳದಾರಿಯನ್ನು ಅವನಲ್ಲಿದ್ದ ಈ ಬಿದನೂರಿನ ಮಂತ್ರಿಯು ತಿಳಿಸಲು, ಹೈದರಲ್ಲಿಯು ತನ್ನ ಸೈನ್ಯದ ಕೆಲ ಭಾಗವನ್ನು ತೆಗೆದು ಕೊಂಡು ಆ ಮಾರ್ಗದಿಂದ ಪಟ್ಟಣದ ಪ್ರವೇಶ ಮಾಡಿದನು. ಬಿದನೂರಿನ

ದಂಡಾಳುಗಳು ಬೇರೊಂದೆಡೆಗೆ ಹೈದರಲ್ಲಿಯು ಉಳಿದ ದಂಡಾಳುಗಳೊಡನೆ ಯುದ್ಧ ನಡಿಸಿದ್ದರು. ಹೀಗೆ ಹೈದರಲ್ಲಿಯು ಪಟ್ಟಣವನ್ನು ಪ್ರವೇಶ ಮಾಡಿದ ಕೂಡಲೆ, ರಾಜಧಾನಿಯನ್ನು ರಕ್ಷಿಸುವದು ಅವರಿಗೆ ಅಶಕ್ಯವಾಯಿತು. ಎಲ್ಲೆಲ್ಲಿಯೂ ಪಟ್ಟಣಿಗರು ಚದರಿ ಹೋಗಹತ್ತಿದರು. ಆಗ ವೀರವಮ್ಮಾಜಿಯು ಪಟ್ಟಣವು ಶತ್ರುಗಳ ಕೈವಶವಾಗುವದೆಂದು ತಿಳಿದು ತನ್ನ ಅರಮನೆಗೆ ಬೆಂಕಿ ಹಚ್ಚಿ ಹೊರಬಿದ್ದಳು. ಪಟ್ಟಣಿಗರೆಲ್ಲರೂ ತಮ್ಮ ತಮ್ಮ ಮನೆಗಳನ್ನು ಬಿಟ್ಟುಕೊಟ್ಟು ಅರಣ್ಯ ಪ್ರದೇಶವನ್ನು ಆಶ್ರಯಿಸಿದರು. ಆಗ ಪಟ್ಟಣದ ಆಯಕಟ್ಟಿನ ಸ್ಥಳಗಳನ್ನು ಹೈದರಲ್ಲಿಯು ತಿಳಿದವನಾದ್ದರಿಂದ, ಅವನು ಅವುಗಳನ್ನು ಹಸ್ತಗತ ಮಾಡಿಕೊಂಡು ಪಟ್ಟಣವನ್ನು ಸುಲಿಗೆ ಮಾಡಲು ನಿಶ್ಚಯಿಸಿದನು. ಅದರಲ್ಲಿ ಈ ಕಾಲದಲ್ಲಿ ೮೦ ಸಾವಿರ ಮನೆಗಳಿದ್ದವೆಂಬ ಪ್ರತೀತಿ ಇದೆ. ಪಟ್ಟಣಿಗರು ವ್ಯಾಪಾರೋದ್ಯೋಗಗಳಲ್ಲಿ ಬಹು ಊರ್ಜಿತ ಸ್ಥಿತಿಯನ್ನು ಹೊಂದಿದವರಾದ್ದರಿಂದ ಶ್ರೀಮಂತಿಕೆಯಲ್ಲಿ ಬಹಳ ಹೆಸರಾಗಿದ್ದರು. ಹೈದರಲ್ಲಿಯು ಇವರೆಲ್ಲರ ಮನೆಗಳನ್ನು ಮೊದಲು ಕೀಲಿ ಹಾಕಿ ಮೊಹರು ಮಾಡಿದನು ಮತ್ತು ಉರಿಯುತ್ತಲಿದ್ದ ರಾಣಿಯ ಅರಮನೆಯನ್ನು ನಂದಿಸಿದನು. ಆ ಮೇಲೆ ಅವನು ಕ್ರಮವಾಗಿ ಪಟ್ಟಣಿಗರ ಮನೆಗಳೆಲ್ಲವನ್ನೂ ಸುಲಿದನು. ಈ ಸುಲಿಗೆಯಲ್ಲಿ ಅವನಿಗೆ ೧೮ ಕೋಟಿ ರೂಪಾಯಿಗಳು ದೊರೆದವು. ಈ ಹಣದ ಸಹಾಯದಿಂದಲೇ ತನ್ನ ರಾಜ್ಯವು ಮುಂದೆ ಸ್ಥಿರಪಟ್ಟಿತೆಂದು ಹೈದರನು ಆಗಿಂದಾಗ್ಗೆ ಹೇಳುತ್ತಿದ್ದನು.

ಪಟ್ಟಣವು ಈ ಪ್ರಕಾರ ವೈರಿಗಳ ಕೈವಶವಾಗಲು ರಾಣೀ ವೀರವಮ್ಮಾಜಿಯು ತನ್ನ ರಾಜ್ಯವನ್ನು ಬಿಟ್ಟು ಪಶ್ಚಿಮ ತೀರದಲ್ಲಿರುವ ಬಸವರಾಜ ದುರ್ಗಕ್ಕೆ ಓಡಿ ಹೋದಳು. ಆದರೆ ಹೈದರನು ಅವಳನ್ನು ಕೈ ಸೆರೆ ಹಿಡಿಯಲು ದಂಡಾಳುಗಳನ್ನು ಕಳಿಸಲು ಅವಳು ಹೊನ್ನಾವರ, ಆ ಮೇಲೆ ಮಂಗಳೂರಿಗೆ ಓಡಿ ಹೋದಳು. ಅಲ್ಲಿಯೂ ಹೈದರನ ದಂಡಾಳುಗಳು ಬರಲು ಅವಳು ಬಲ್ಲಾಳ ರಾಯದುರ್ಗದಲ್ಲಿ ಅವರ ಕೈಗೆ ಸಿಕ್ಕಿಬಿದ್ದಳು. ಆಗ ಹೈದರಲ್ಲಿಯು ಅವಳನ್ನೂ ಅವಳ ದತ್ತಕ ಮಗನನ್ನೂ ತುಮಕೂರು ಜಿಲ್ಲೆಯಲ್ಲಿರುವ ಮಧ್ದಗಿರಿಯಲ್ಲಿ ಸೆರೆ ಇಟ್ಟನು.

ಹೀಗಿರಲು ಮರಾಠರು ಮುಂದೆ ಈ ಪ್ರದೇಶವನ್ನು ಪ್ರವೇಶಿಸಿದಾಗ ಅವರು ಅವಳನ್ನು ಸೆರೆಯಿಂದ ಮುಕ್ತಮಾಡಲು ಅವಳು ಹೈದರಲ್ಲಿಯ

ರಾಜ್ಯದಲ್ಲಿರಲು ಶಕ್ಯವಿರದ್ದರಿಂದ ಪುಣೆಯಲ್ಲಿರಲು ಬಯಸಿ ಅಲ್ಲಿಗೆ ಹೊರಟಳು. ಆದರೆ ಅವಳು ದಾರಿಯಲ್ಲಿಯೇ ಮರಣ ಹೊಂದಿದಳು. ಅವಳ ದತ್ತಕ ಮಗನಾದ ಸೋಮಶೇಖರ ನಾಯಕನೂ ಕೂಡ ಪುಣೆ ಪಟ್ಟಣದಲ್ಲಿ ತೀರಿಕೊಂಡನು.

ಹೈದರನು ಬಿದನೂರು ಅತ್ಯಂತ ಬಿಕ್ಕಟ್ಟಿನ ಸ್ಥಳದಲ್ಲಿ ಇದ್ದದ್ದನ್ನು ಕಂಡು ಅವನು ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಬೇಕೆಂದು ಮೊದಲು ಬಯಸಿದನು. ಆದ್ದರಿಂದ ಅವನು ಅದಕ್ಕೆ ಹೈದರನಗರವೆಂಬ ಹೆಸರನ್ನಿಟ್ಟನು. ಅಲ್ಲಿ ಅವನು ಒಂದು ಭವ್ಯವಾದ ಅರಮನೆಯನ್ನು ಸಹ ಕಟ್ಟಿಸಲು ಉದ್ಯುಕ್ತನಾದನು. ಅಲ್ಲಿ ತನ್ನ ಟಂಕಶಾಲೆಯನ್ನು ಸ್ಥಾಪಿಸಿ, ತನ್ನ ಹೆಸರಿನ ನಾಣ್ಯಗಳನ್ನು ಹೊರಡಿಸಹತ್ತಿದನು. ಅಲ್ಲಿಯ ಮೊದಲಿನ ವ್ಯಾಪಾರೋದ್ಯೋಗಗಳನ್ನು ಹೆಚ್ಚಿಸಲೂ ಬಹಳ ಉತ್ತೇಜನ ಕೊಟ್ಟನು. ಆದರೆ ಈ ಪ್ರಯತ್ನಗಳೆಲ್ಲವೂ ನಿಷ್ಫಲವಾದವು. ಬಿದನೂರು ಮೊದಲಿನ ವೈಭವ ಸ್ಥಿತಿಯನ್ನು ಎಂದೂ ಹೊಂದಲಿಲ್ಲ.

ಅವನು ಬಿದನೂರಿನ ರಾಜ್ಯದಲ್ಲಿದ್ದ ಮೊದಲಿನ ಅಧಿಕಾರಿಗಳನ್ನು ತಳ್ಳದೆ ಅವರನ್ನು ಪ್ರಾರಂಭದಲ್ಲಿ ಅವರವರ ಸ್ಥಾನದಲ್ಲಿಯೇ ಇರಿಸಿದನು. ಆದರೆ ಪಟ್ಟಣದಲ್ಲಿ ಬಹು ಜನರು ತಮ್ಮ ಮೊದಲಿನ ಅರಸರನ್ನೇ ಬಯಸುತ್ತಿದ್ದದರಿಂದ ಕೆಲವರು ಹೈದರಲ್ಲಿಯ ವಿರುದ್ಧ ಒಳಸಂಚು ಮಾಡಿದರು. ಇದು ಹೈದರಲ್ಲಿಗೆ ಗೊತ್ತಾಗಲು ಅವನು ೩೦೦ ಜನರನ್ನು ಏಕ ಕಾಲದಲ್ಲಿ ಗಲ್ಲಿಗೆ ಏರಿಸಿದನು. ಮುಂದೆ ಪಟ್ಟಣಿಗರು ಅವನ ವಿರುದ್ಧ ಏನೂ ಮಾಡಲಾರದಾದರು.

ಈ ಪ್ರಕಾರ ಬಲಶಾಲಿಯಾದ ಹೈದರಲ್ಲಿಯು ಬಿದನೂರಿನ ರಾಜ್ಯವನ್ನು ಸಂಪೂರ್ಣವಾಗಿ ನಾಶಪಡಿಸಿದನು. ಇದು ೧೭೬೩ ಮಾರ್ಚ ತಿಂಗಳಿನಲ್ಲಿ ಸಂಭವಿಸಿತು. ಹೈದರಲ್ಲಿಯ ತರುವಾಯ ಬಿದನೂರು ಊರ್ಜಿತ ಸ್ಥಿತಿಯನ್ನು ಎಂದೂ ಹೊಂದಲಿಲ್ಲ. ಅದರ ವ್ಯಾಪಾರವು ಕುಗ್ಗಿತು. ಮೊದಲಿನ ಅದರ ಶ್ರೀಮಂತಿಕೆಯು ಬಯಲಾಗಿ ಹೋಯಿತು. ಈಗ ಅದು ಶಿವಮೊಗ್ಗೆ ಜಿಲ್ಲೆಯಲ್ಲಿ 'ನಗರ' ಎಂಬ ಹೆಸರಿನಿಂದ ೯-೧೦ ಸಾವಿರ ಜನವಸತಿಯುಳ್ಳ ಸಣ್ಣ ಗ್ರಾಮ ಮಾತ್ರವಾಗಿ ಉಳಿದದೆ.

---

# ೧೬ ನೇ ಪ್ರಕರಣ.

## ಸ್ವಾದಿಯ ರಾಜರು.

ಸ್ವಾದಿಯ ರಾಜರು ಈಗ ಕಾರವಾರ ಜಿಲ್ಲೆಯಲ್ಲಿರುವ ಸಿರಸಿ, ಹಲ್ಯಾಳ, ಯಲ್ಲಾಪುರ, ಕಾರವಾರ, ಅಂಕೋಲಾ ಮತ್ತು ಕುಮಟಾ ತಾಲೂಕುಗಳಲ್ಲಿಯೂ ಸುಪೆ ಪೇಠಾದಲ್ಲಿಯೂ ೧೫೫೫ ರಿಂದ ೧೭೬೩ ವರೆಗೆ ರಾಜ್ಯವಾಳಿದರು. ಇವರ ರಾಜಧಾನಿಯು ಸಿರಸಿ ತಾಲೂಕಿನಲ್ಲಿರುವ ಸ್ವಾದಿಯು. ರಾಜರ ಹೆಸರುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

| | | |
|---|---|---|
| (೧) | ಇಮ್ಮಡಿ ಅರಸಪ್ಪನಾಯಕ | ೧೫೫೫–೧೫೯೮ |
| (೨) | ರಾಮಚಂದ್ರನಾಯಕ | ೧೫೯೮–೧೬೧೮ |
| (೩) | ರಘುನಾಥನಾಯಕ | ೧೬೧೮–೧೬೩೮ |
| (೪) | ಮಧುಲಿಂಗನಾಯಕ | ೧೬೩೮–೧೬೭೪ |
| (೫) | ಸದಾಶಿವರಾಜ | ೧೬೭೪–೧೬೯೭ |
| (೬) | ಬಸವಲಿಂಗರಾಜ | ೧೬೯೭–೧೭೪೫ |
| (೭) | ಇಮ್ಮಡಿ ಸದಾಶಿವರಾಯ | ೧೭೪೫–೧೭೬೩ |

**ಅರಸಪ್ಪರಾಜ:—** (೧೫೫೫–೧೫೯೮) ವಿಜಯನಗರದ ಅರಸರಲ್ಲಿ ಅತ್ಯಂತ ಪ್ರತಾಪಶಾಲಿಯಾದ ಕೃಷ್ಣರಾಜನ ತಂದೆಗೆ ಮಕ್ಕಳಿರಲಿಲ್ಲ. ಆದ್ದರಿಂದ ಅವನು ತನ್ನ ತಂಗಿಯ ಮಗನಾದ ಅರಸಪ್ಪರಾಜನಿಗೆ ಯುವರಾಜ ಪಟ್ಟವನ್ನು ಕಟ್ಟಿದನು. ಆದರೆ ಮುಂದೆ ಅವನಿಗೆ ಮಕ್ಕಳಾದ್ದರಿಂದ ಅರಸಪ್ಪರಾಜನು ಪಟ್ಟಕೊಂಡುವದು ನಿಂತಿತು. ಆದರೆ ಮುಂದೆ ಸ್ವಾದಿಯ ಸೀಮೆಗೆ ಅವನು ಸುಬೇದಾರನಾಗಿ ವಿಜಯನಗರದ ರಾಜನಿಂದ ನಿಯಮಿಸಲ್ಪಟ್ಟನು. ಅವನು ರಾಮರಾಜನ ಕಾಲದಲ್ಲಿ ಅವನಿಗೆ ಯಾವಾಗಲೂ ಸಹಾಯಕನಾಗಿ ರಾಜ್ಯವಾಳುತ್ತ ಬಂದನು. ಅವನು ಈ ಭಾಗದಲ್ಲಿ ಇದ್ದಾಗ್ಗೆ ಇಲ್ಲಿ ಜೈನ ಧರ್ಮೀಯರು ಬಹು ಪ್ರಾಬಲ್ಯವನ್ನು ಹೊಂದಿದ್ದರು. ಆರಂಭದಲ್ಲಿ ಅವನು ಅವರ ಧರ್ಮವನ್ನು ಪುರಸ್ಕರಿಸಿದರೂ ಕೂಡ ಅವನು ಅದನ್ನು ಬಿಟ್ಟು ಬ್ರಾಹ್ಮಣ ಧರ್ಮವನ್ನು ಬಲಪಡಿಸಿದನು. ಅವನು ಮುಖ್ಯವಾಗಿ ಹವಿಕ ಬ್ರಾಹ್ಮಣರಿಗೆ

ಬಹಳ ಉತ್ತೇಜನ ಕೊಟ್ಟು ಅವರ ಮೂಲಕ ಒಕ್ಕಲುತನದಲ್ಲಿ ಬಹಳ ಸುಧಾರಣೆಯನ್ನು ಮಾಡಿದನು. ಇವನ ಆಳಿಕೆಯಲ್ಲಿ ರಾಜ್ಯವು ಅಭ್ಯುದಯ ಸ್ಥಿತಿಯನ್ನು ಹೊಂದಿ ಅದರ ಆದಾಯವು ಬಹಳ ಹೆಚ್ಚಿತು.

**ರಾಮಚಂದ್ರರಾಜಃ** — (೧೫೯೮-೧೬೧೮) ಅರಸಪ್ಪರಾಜನ ತರುವಾಯ ಅವನ ಮಗನಾದ ರಾಮಚಂದ್ರ ರಾಜನು ಪಟ್ಟವೇರಿದನು. ಅವನು ತನ್ನ ತಂದೆಯು ಗೊತ್ತುಪಡಿಸಿದ ಧಾರ್ಮಿಕ ಮತ್ತು ರಾಜಕೀಯ ಪದ್ಧತಿಗಳನ್ನೇ ಸ್ಥಿರಪಡಿಸಿದನು. ಅವನು ದೇಶದಲ್ಲಿ ಶಾಂತತೆಯನ್ನು ಕಾಯ್ದುಕೊಂಡು ರಾಜ್ಯವಾಳಿದನು.

**ರಘುನಾಥರಾಜಃ** — (೧೬೧೮-೧೬೩೮) ಅವನ ಕಾಲದಲ್ಲಿ ದಾಳಿಗಾರರು ರಾಜ್ಯದಲ್ಲಿ ದಂಗೆ ಎಬ್ಬಿಸಿದರು. ಸೈನ್ಯದಲ್ಲಿಯೂ ಕಲಹಗಳಿದ್ದವು. ಆದರೆ ಅವುಗಳನ್ನು ಅರಸನು ಮುರಿದು ಶಾಂತತೆಯನ್ನು ಸ್ಥಾಪಿಸಿದನು. ಬನವಾಸಿ ಮಧುಕೇಶ್ವರನ ದೇವಾಲಯದಲ್ಲಿ ಒಂದು ಕಲಾಪೂರ್ಣವಾದ ತೂಗು ಮಂಚವಿದೆ. ಇದನ್ನು ಸಿದ್ಧಪಡಿಸಿ ಕಾಣಿಕೆಯಾಗಿ ದೇವಾಲಯಕ್ಕೆ ಕೊಟ್ಟವನು ಈತನೇ ಇದ್ದಾನೆಂದು ಅದರ ಮೇಲಿನ ಬರಹದಿಂದ ತಿಳಿದು ಬರುತ್ತಿದೆ.

**ಮಧುಲಿಂಗರಾಜಃ** — (೧೬೩೮-೧೬೭೪) ರಘುನಾಥರಾಜನ ತರುವಾಯ ಅವನ ಮಗನಾದ ಮಧುಲಿಂಗರಾಜನು ಪಟ್ಟವೇರಿದನು. ಇವನು ವೀರಶೈವ ಮತವನ್ನು ಅಂಗೀಕರಿಸಿದನು. ಇವನ ತರುವಾಯ ಬಂದ ರಾಜರೆಲ್ಲರೂ ವೀರಶೈವರಾಗಿಯೇ ಉಳಿದರು. ಇವನು ೧೬೭೪ ರಲ್ಲಿ ಕಾಲವಾದನು.

**ಸದಾಶಿವರಾಜಃ** — (೧೬೭೪-೧೬೯೭) ಸ್ವಾದಿಯ ಅರಸರಲ್ಲಿ ಈತನೇ ಅತ್ಯಂತ ಪ್ರಖ್ಯಾತಿಯನ್ನು ಹೊಂದಿದವನು. ಅವನು ಬಹು ಪರಾಕ್ರಮಿಯೂ ರಾಜಕಾರಣನಿಪುಣನೂ ಆಗಿದ್ದನು. ಅವನು ಮೊದಲು ತನ್ನ ಸೈನ್ಯದಲ್ಲಿ ಉತ್ತಮ ವ್ಯವಸ್ಥೆಯನ್ನುಂಟು ಮಾಡಿ ತನ್ನ ರಾಜ್ಯದ ಮೇರೆಯನ್ನು ೧೬೯೦ರ ಒಳಗಾಗಿ ಪಶ್ಚಿಮಕ್ಕೆ ಸಮುದ್ರ ತೀರದ ವರೆಗೂ ಹಬ್ಬಿಸಿದನು. ಕಾರವಾರವೇ ಅವನ ಮುಖ್ಯ ಬಂದರವಾಗಿತ್ತು. ಅಲ್ಲಿ ಇಂಗ್ಲಿಷ ಮತ್ತು ಪೋರ್ತುಗೀಜರ ವ್ಯಾಪಾರದ ಅಂಗಡಿಗಳಿದ್ದವು.

ಅವರು ಇಲ್ಲಿಂದ ಕರ್ನಾಟಕದ ಒಳಭಾಗದೊಡನೆ ಬಹು ದೊಡ್ಡ ವ್ಯಾಪಾರವನ್ನು ಸಾಗಿಸುತ್ತ ಬಂದರು. ಅವರು ಸದಾಶಿವರಾಯನಿಗೆ ಕಾಣಿಕೆಯನ್ನು ಸಲ್ಲಿಸುತ್ತ ಬರುವರು.

ಸದಾಶಿವರಾಯನಿಗೆ ಶಿವಾಜಿಯ ಮಗನಾದ ಸಂಭಾಜಿಯೊಡನೆ ಯುದ್ಧ ಮಾಡುವ ಪ್ರಸಂಗವು ಪ್ರಾಪ್ತವಾಯಿತು. ಸ್ವಾದಿಯ ರಾಜ್ಯವು ಶ್ರೀಮಂತಿಕೆಯಲ್ಲಿ ಬಹಳ ಹೆಸರಾದದ್ದರಿಂದ ಮರಾಠರು ಅದನ್ನು ಸುಲಿಯಲು ಬಹಳ ಹವಣಿಸುತ್ತಿದ್ದರು. ಈ ಯುದ್ಧದ ಕಾಲದಲ್ಲಿ ಸಂಭಾಜಿಯು ತಾನು ಸ್ವತಃ ಸ್ವಾದಿಯ ಮೇಲೆ ದಂಡೆತ್ತಿ ಬಂದನು. ಆದರೆ ಅವನಿಗೆ ಅದರಲ್ಲಿ ಯಶಸ್ಸು ದೊರೆಯಲಿಲ್ಲ. ಸದಾಶಿವರಾಯನು ಅವನೊಡನೆ ಶೂರತನದಿಂದ ಕಾದಿ ಅವನನ್ನು ಹಿಮ್ಮೆಟ್ಟಿಸಿದನು. ಆಗ ಸಂಭಾಜಿಯು ಪೋರ್ತುಗೀಜರನ್ನು ತನ್ನ ಕಡೆಗೆ ಮಾಡಿಕೊಂಡು ಸ್ವಾದಿಯ ರಾಜ್ಯದ ಮೇಲೆ ಪುನಃ ನುಗ್ಗಲು ಪ್ರಯತ್ನಿಸಿದನು ಆದರೆ ಪೋರ್ತುಗೀಜರು ಮರಾಠರೊಡನೆ ಸ್ನೇಹ ಬೆಳಿಸುವದು ತಮಗೆ ಅಹಿತವೆಂದು ತಿಳಿದದ್ದರಿಂದ ಸಂಭಾಜಿಗೆ ಸಹಾಯ ಮಾಡಲು ಅವರು ಹಿಂದೆಗೆದರು. ಇದರ ತರುವಾಯ ಸ್ವಾದಿಯ ಮೇಲಿನ ಸಂಭಾಜಿಯ ದಾಳಿಗಳು ನಿಂತು ಹೋದವು.

ಸ್ವಾದಿಯ ರಾಜ್ಯದಲ್ಲಿ ಅತ್ಯುತ್ತಮವಾದ ಮೆಣಸು ಬೆಳೆಯುತ್ತಿತ್ತು. ಇದರ ವ್ಯಾಪಾರವು ಇಲ್ಲಿ ಬಹಳವಾಗಿ ಬೆಳೆದಿತ್ತು. ಅರಸನು ಕೆಲವು ದಿನ ಸ್ವಾದಿಯಲ್ಲಿಯೂ, ಕೆಲವು ದಿನ ಸಾಂಬ್ರಾಣಿಯಲ್ಲಿಯೂ ಇದ್ದುಕೊಂಡು ರಾಜ್ಯವಾಳುತ್ತಿದ್ದನು. ಸಾಂಬ್ರಾಣಿಯು ಈ ಕಾಲದಲ್ಲಿ ಬಹಳ ದೊಡ್ಡ ಪಟ್ಟಣವಾಗಿತ್ತು. ಅದರಿಂದ ಅರಸನಿಗೆ ೩ ಲಕ್ಷ ರೂಪಾಯಿಗಳ ಉತ್ಪನ್ನವು ಬರುತ್ತಿತ್ತು.

ಅರಸನು ಶೂರನಾಗಿದ್ದಂತೆ ವಾಙ್ಮಯಾಭಿರುಚಿಯುಳ್ಳವನೂ, ಆಗಿದ್ದನು. ಅವನು 'ಸದಾಶಿವ ಪಂಚಶತನೀತಿಗಳು' ಎಂಬ ಹೆಸರಿನ ಕಾವ್ಯವನ್ನು ರಚಿಸಿದ್ದಾನೆ.

೧೬೮೪ ರಲ್ಲಿ ಕಾರವಾರದಲ್ಲಿಯ ಇಂಗ್ಲಿಷ ವ್ಯಾಪಾರಸ್ಥರಿಗೂ ಪಟ್ಟಣದಲ್ಲಿಯವರಿಗೂ ಕೆಲವೊಂದು ಕಾರಣದ ಮೂಲಕ ಕದನವೆಸಗಿದ್ದು ತಿಳಿಯುತ್ತಿದೆ. ಇಂಗ್ಲಿಷ ಹಡಗುಪಡೆಯವರು ಪಟ್ಟಣದಲ್ಲಿ ಬಂದಾಗ್ಗೆ




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆವೆಚ್ಚಸಹಿತ ರೂ. ೪—೪—೦ ವ್ಹಿ. ಪಿ. ಖರ್ಚು ೦—೪—೦

ಸಂಪುಟ ೧೯] ಸಪ್ಟೆಂಬರ ೧೯೪೪. [ಸಂಚಿಕೆ ೨

## ವಿಷಯಾನುಕ್ರಮಣಿಕೆ.

# ಶಿವಾನುಭವಕ್ಕೆ ಸಹಾಯ.

---

ಶಿವಾನುಭವ ಪತ್ರಿಕೆಗೆ ಕೆಳಗಿನ ಮಹನೀಯರು ಸಹಾಯ ಮಾಡಿದ್ದು ಇವರೆಲ್ಲರಿಗೆ ನಾವು ಅತ್ಯಂತ ಕೃತಜ್ಞರಾಗಿರುವೆವು

(೧) ಶ್ರೀ ಬಸವಣ್ಣೆಪ್ಪ ಗುರಪ್ಪ ಕಣಾಜನವರ ಧಾರವಾಡ. ೨೫-೮-೦

(೨) ಶ್ರೀ. ವೀರಪ್ಪ ಸಿದ್ಧಲಿಂಗಪ್ಪ ವಿರುಪಾಕ್ಷಿ ಬೆಳಗಾವಿ. (ಇವರು ಹೋದ ವರ್ಷ ಶಿವಾನುಭವ ಪತ್ರಿಕೆಗೆ ಸಹಾಯ ಧನ ಕೂಡಿಸುವಲ್ಲಿ ನಮಗೆ ವಿಶೇಷ ನೆರವಾದರಲ್ಲದೆ ಈ ವರ್ಷವೂ ಬೆಳಗಾವಿಯಲ್ಲಿ ವರ್ಗಣೀದಾರರನ್ನು ಮಾಡಿಕೊಡಲು ಬಹಳ ಸಹಾಯ ಮಾಡಿದ್ದಾರೆ.) ೧೮-೮-೦

(೩) ನಂಜೇಗೌಡರ ಮಕ್ಕಳು ಮಲ್ಲೇಗೌಡರು ಮು. ಸಸಿವಾಳ (ಮೈಸೂರು) ೪-೬-೦

ಸಂಪಾದಕರು — **ಶಿವಾನುಭವ**.

# ಶಿವಾನುಭವ

| ವರ್ಷ ೧೯ | ನವ್ಹೆಂಬರ ೧೯೪೪. | ಸಂಚಿಕೆ ೨ |
|---|---|---|

## — ಶಿವನೇ ಸರ್ವದೇವಶಿಖಾಮಣಿಯೆಂದು ಭಾವಿಸುವದು.

( ಲೇಖಕ:— ಶಿವಮೂರ್ತಿ )

ಶಿವನೇ ಸರ್ವದೇವಶಿಖಾಮಣಿಯೆಂದು ಅಚ್ಚೊತ್ತಿದಂತೆ ಭಾವಿಸುವದು ವೀರಶೈವರ ೧೨ ನೆಯ ಆಚಾರ. "ಶಿವನೇ ವೇವರೊಳುತ್ತಮಂ ಹರಹರಾ ಶ್ರೀ ಚೆನ್ನಸೋಮೇಶ್ವರಾ" ಎಂದು ಪಾಲ್ಕುರಿಕೆ ಸೋಮನಾಥ ಕವಿಯು ಹೇಳಿದ್ದಾನೆ. ಆದುದರಿಂದ 'ಶಿವ' ಎಂಬ ಶಬ್ದವು ಎಂದು ಹುಟ್ಟಿತು, ಅದರ ಬೆಳವಣಿಗೆಯು ಯಾವ ರೀತಿಯಿಂದಾಯಿತು, ಎಂಬದನ್ನು ವಿವರಿಸಿ ಶಿವನೇ ಸರ್ವದೇವಶಿಖಾಮಣಿಯು ಹೇಗೆಂಬದನ್ನು ವಿವೇಚಿಸುವದು ಈ ಲೇಖನ ಮುಖ್ಯೋದ್ದೇಶವು.

ವೇದಗಳಿಗಿಂತ ಪೂರ್ವದಲ್ಲಿ ಶಿವನಿಗೆ ರುದ್ರನೆಂಬ ಹೆಸರಿತ್ತೆಂದು " ಮ್ಯಾಕ್ಸಮುಲ್ಲರ " ಸಾಹೇಬರ ಮತವಿದೆ. ಇದೇ ಮತವನ್ನು ಗ್ರಹಿತವಾಗಿಟ್ಟುಕೊಂಡರೆ ವೇದಗಳು ಕ್ರಿ. ಶ. ಪೂರ್ವದಲ್ಲಿ ೫—೬ ಸಾವಿರ ವರ್ಷಗಳ ಹಿಂದೆ ಹುಟ್ಟಿ ಬೆಳೆದವೆಂದು ಪಂಡಿತರ ಅಭಿಪ್ರಾಯವುಂಟು. ಆದ್ದರಿಂದ ' ಶಿವ ' ಶಬ್ದವು ಕ್ರಿ. ಶ. ಪೂರ್ವದಲ್ಲಿ ಕನಿಷ್ಠ ಪಕ್ಷ ೮–೧೦ ಸಾವಿರ ವರ್ಷಗಳ ಹಿಂದೆ ಬಳಕೆಯಲ್ಲಿದ್ದಿರಬೇಕೆಂದು ಊಹಿಸಬಹುದಾಗಿದೆ.

# ಶಿವಾನುಭವಕ್ಕೆ ಸಹಾಯ.

---

ಶಿವಾನುಭವ ಪತ್ರಿಕೆಗೆ ಕೆಳಗಿನ ಮಹನೀಯರು ಸಹಾಯ ಮಾಡಿದ್ದು ಇವರೆಲ್ಲರಿಗೆ ನಾವು ಅತ್ಯಂತ ಕೃತಜ್ಞರಾಗಿರುವೆವು

(೧) ಶ್ರೀ ಬಸವಣ್ಣೆಪ್ಪ ಗುರಪ್ಪ ಕಣಾಜನವರ ಧಾರವಾಡ. — ೨೫-೦-೦

(೨) ಶ್ರೀ. ವೀರಪ್ಪ ಸಿದ್ಧಲಿಂಗಪ್ಪ ವಿರುಪಾಕ್ಷಿ ಬೆಳಗಾವಿ. (ಇವರು ಹೋದ ವರ್ಷ ಶಿವಾನುಭವ ಪತ್ರಿಕೆಗೆ ಸಹಾಯ ಧನ ಕೂಡಿಸುವಲ್ಲಿ ನಮಗೆ ವಿಶೇಷ ನೆರವಾದರಲ್ಲದೆ ಈ ವರ್ಷವೂ ಬೆಳಗಾವಿ ಯಲ್ಲಿ ವರ್ಗಣೀದಾರರನ್ನು ಮಾಡಿಕೊಡಲು ಬಹಳ ಸಹಾಯ ಮಾಡಿದ್ದಾರೆ.) — ೧೦-೦-೦

(೩) ನಂಜೇಗೌಡರ ಮಕ್ಕಳು ಮಲ್ಲೇಗೌಡರು ಮು. ಸಸಿವಾಳ (ಮೈಸೂರು) — ೪-೬-೦

ಸಂಪಾದಕರು— **ಶಿವಾನುಭವ.**

# ಶಿವಾನುಭವ

ವರ್ಷ ೧೯ | ನವ್ಹೆಂಬರ ೧೯೪೪. | ಸಂಚಿಕೆ ೨


## ಶಿವನೇ ಸರ್ವದೇವಶಿಖಾಮಣಿಯೆಂದು ಭಾವಿಸುವದು.

( ಲೇಖಕ:— ಶಿವಮೂರ್ತಿ )



ಶಿವನೇ ಸರ್ವದೇವಶಿಖಾಮಣಿಯೆಂದು ಅಚ್ಚೊತ್ತಿದಂತೆ ಭಾವಿಸುವದು ವೀರಶೈವರ ೧೨ ನೆಯ ಆಚಾರ. "ಶಿವನೇ ದೇವರೊಳುತ್ತಮಂ ಹರಹರಾ ಶ್ರೀ ಚೆನ್ನಸೋಮೇಶ್ವರಾ" ಎಂದು ಪಾಲ್ಕುರಿಕೆ ಸೋಮನಾಥ ಕವಿಯು ಹೇಳಿದ್ದಾನೆ. ಆದುದರಿಂದ 'ಶಿವ' ಎಂಬ ಶಬ್ದವು ಎಂದು ಹುಟ್ಟಿತು, ಅದರ ಬೆಳವಣಿಗೆಯು ಯಾವ ರೀತಿಯಿಂದಾಯಿತು, ಎಂಬದನ್ನು ವಿವರಿಸಿ ಶಿವನೇ ಸರ್ವದೇವಶಿಖಾಮಣಿಯು ಹೇಗೆಂಬದನ್ನು ವಿವೇಚಿಸುವದು ಈ ಲೇಖದ ಮುಖ್ಯೋದ್ದೇಶವು.

ವೇದಗಳಿಗಿಂತ ಪೂರ್ವದಲ್ಲಿ ಶಿವನಿಗೆ ರುದ್ರನೆಂಬ ಹೆಸರಿತ್ತೆಂದು " ಮ್ಯಾಕ್ಸಮುಲ್ಲರ " ಸಾಹೇಬರ ಮತವಿದೆ. ಇದೇ ಮತವನ್ನು ಗ್ರಹಿತವಾಗಿಟ್ಟುಕೊಂಡರೆ ವೇದಗಳು ಕ್ರಿ. ಶ. ಪೂರ್ವದಲ್ಲಿ ೫—೬ ಸಾವಿರ ವರ್ಷಗಳ ಹಿಂದೆ ಹುಟ್ಟಿ ಬೆಳೆದವೆಂದು ಪಂಡಿತರ ಅಭಿಪ್ರಾಯವುಂಟು. ಆದ್ದರಿಂದ ' ಶಿವ ' ಶಬ್ದವು ಕ್ರಿ. ಶ. ಪೂರ್ವದಲ್ಲಿ ಕನಿಷ್ಟ ಪಕ್ಷ ೮–೧೦ ಸಾವಿರ ವರ್ಷಗಳ ಹಿಂದೆ ಬಳಕೆಯಲ್ಲಿದ್ದಿರಬೇಕೆಂದು ಊಹಿಸಬಹುದಾಗಿದೆ.

ಶಿವನು ದ್ರಾವಿಡರ ದೇವರು. ಆರ್ಯರ ದೇವರಲ್ಲ. ಆರ್ಯರು ಹಿಂದುಸ್ತಾನಕ್ಕೆ ಬರುವದಕ್ಕಿಂತ ಪೂರ್ವದಲ್ಲಿ ಶೈವ ಪಂಥವು ಇಡೀ ಹಿಂದುಸ್ಥಾನದಲ್ಲಷ್ಟೇ ಅಲ್ಲದೆ, ಸಿಲೋನ, ಸುಮಾತ್ರಾ, ಜಾವಾ, ಬಾಬಿಲೋನ ಮೊದಲಾದ ಪ್ರದೇಶಗಳಲ್ಲಿಯೂ ಹಬ್ಬಿತ್ತೆಂದು ಅಲ್ಲಿ ಶೋಧವಾದ ಅವಶೇಷಗಳಿಂದ ತರ್ಕಿಸಬಹುದಾಗಿದೆ. ಆದ್ದರಿಂದ ಶಿವನು ಭರತ ಖಂಡದ ಅತ್ಯಂತ ಪ್ರಾಚೀನವಾದ ದೇವತೆ, ಮತ್ತು ಅತಿ ದೊಡ್ಡ ಕ್ಷೇತ್ರವನ್ನು ವ್ಯಾಪಿಸಿಕೊಂಡ ದೇವತೆ ಎಂದು ಎಲ್ಲರೂ ಒಪ್ಪತಕ್ಕ ಮಾತೇ- ಸರಿ.

ಭರತ ಖಂಡವು ಒಕ್ಕಲಿಗರ ನಾಡು. ದ್ರಾವಿಡರೆಲ್ಲ ಒಕ್ಕಲಿಗರು. ಅಂದ ಮೇಲೆ ಅವರು ತಮ್ಮ ದೇವರಿಗೆ ' ಶಿವ ' ಎಂಬ ಹೆಸರನ್ನಿಟ್ಟಿರಬಹುದು. ಆ ದೇವರಿಗೆ ಒಕ್ಕಲಿಗನ ರೂಪವನ್ನು ಕೊಟ್ಟಂತೆ ಕಂಡು ಬರುತ್ತದೆ. ದೇವರಿಗೆ ಮನುಷ್ಯ ರೂಪವನ್ನು ಕಲ್ಪಿಸಿದವರು ದ್ರಾವಿಡರೇ. ಆದರೆ ದೇವರು ಮತ್ಸ್ಯ, ಕೂರ್ಮ, ವರಾಹ, ಸಿಂಹ, ಆನೆ ಇತ್ಯಾದಿಯೆಂದು ತಿಳಿದವರು ಆರ್ಯರು. ಒಕ್ಕಲಿಗನಿಗೆ ಮುಖ್ಯವಾಗಿ ಬೇಕಾದುದು ಭೂಮಿ, ಮಳೆ, ಎತ್ತು, ಕೂರಿಗೆ. ಭೂಮಿಗೆ ಪಾರ್ವತಿಯೆಂದೂ, ಮಳೆಗೆ ಗಂಗೆಯೆಂದೂ, ಎತ್ತಿಗೆ ನಂದಿಯೆಂದೂ, ಕೂರಿಗೆಗೆ ತ್ರಿಶೂಲವೆಂದೂ ಅವರು ಹೆಸರಿಟ್ಟಿರಬಹುದು. ಆ ಶಿವನಿಗೆ ಇರಲಿಕ್ಕೆ ಮನೆಯು ಬೇಕೆಂದು ಹೊಳೆಗಳುಳ್ಳ ಪ್ರದೇಶಗಳಲ್ಲಿ ಗುಡಿಗಳನ್ನು ಕಟ್ಟಿದರು. ಮಾನವನ ಪ್ರಾಥಮಿಕಾವಸ್ಥೆಯಲ್ಲಿ ಇಷ್ಟೇ ಕಲ್ಪನೆಯಿರಲಿಕ್ಕೆ ಸಾಕು.

ಶಿವನಿಗೆ ಯಾವ ಆಕಾರವನ್ನು ಕಲ್ಪಿಸಿದರೆಂಬದನ್ನು ವಿಚಾರಿಸೋಣ. ಶಿವನು ಭರತ ಖಂಡದ ರೂಪವನ್ನೇ ಶಿವನಿಗೂ ಕೊಟ್ಟಿರಬೇಕು. ಅದು ಹೇಗೆಂದರೆ ಕೈಲಾಸ (ಹಿಮಾಲಯ) ಪರ್ವತವೇ ಗೋಲಕ, ಉತ್ತರ ಹಿಂದುಸ್ತಾನ, ಆಸಾಮು ಬ್ರಹ್ಮದೇಶಗಳೇ ಜಲಹರಿ, ದಕ್ಷಿಣವೇ ಪೀಠ, ಈ ರೀತಿಯಾಗಿ ಭರತ ಖಂಡವೆಂಬ ರಾಷ್ಟ್ರ ಪುರುಷನೇ ಗುಡಿಯಲ್ಲಿ ಮೂರ್ತಿಗೊಂಡು ಕುಳಿತಂತೆ ವಿಗ್ರಹಗಳನ್ನು ಸ್ಥಾಪಿಸಿದರು. ಈ ವಿಗ್ರಹಗಳಿಗೆ ಲಿಂಗಗಳೆಂದು ಹೆಸರಿಟ್ಟರು. ಇಂಥ ವಿಗ್ರಹಗಳು ಅತಿ ಪ್ರಾಚೀನ ಕಾಲದವೆಂಬದು ಹರಪ್ಪಾ, ಮಹೇಂಜೆದಾರೋಗಳಲ್ಲಿ ಹೊರಟ ಅವಶೇಷಗಳಿಂದ ಕಂಡು ಬರುತ್ತದೆ.

ಶಿವ ಶಬ್ದವು ವೇದಗಳಲ್ಲಿಲ್ಲ. ಅದು ಮೊದಲು ಸಂಸ್ಕೃತ ಶಬ್ದವೇ ಆಗಿದ್ದಿಲ್ಲ. ಅದರಂತೆ ಆ ಶಿವನ ಕುರುಹಾದ ಲಿಂಗ ಶಬ್ದವೂ ವೇದಗಳ ಲ್ಲಿಲ್ಲ. ಸಂಸ್ಕೃತದಲ್ಲಿ 'ಲಿಂಗ' ಶಬ್ದದ ಮೂಲಾರ್ಥವು 'ಶಿಶ್ನ'ವೆಂದಿ ರುವದರಿಂದ ಹಿಂದುಸ್ತಾನಕ್ಕೆ ಬಂದ ಆರ್ಯರು, ದ್ರಾವಿಡರು ಕರೆಯುವ ಈ ಲಿಂಗ ಶಬ್ದವನ್ನು ಕೇಳಿ ಲಿಂಗಗಳಿಗೆ 'ಶಿಶ್ನದೇವಾಃ' ಎಂದು ಹಾಸ್ಯಮಾಡಿದಂತೆ ಕಂಡು ಬರುತ್ತದೆ. ಇಂಗ್ಲಿಷಿನಲ್ಲಿ ಆಣೆಕಲ್ಲಿಗೆ 'ಹೇಲ್' ಎಂದೆನ್ನುವರು.

ಯಾರಾದರೂ "ಇಂಗ್ಲಂಡಿನಲ್ಲಿ 'ಹೇಲ್' ಬೀಳುತ್ತದೆ." ಎಂದು ಹೇಳಿದರೆ ಅದನ್ನು ಕೇಳಿ ಕನ್ನಡಿಗರು ಹಾಸ್ಯಮಾಡಬಹುದಲ್ಲವೇ? ಅದರಂತೆ ಆರ್ಯ ದ್ರಾವಿಡರಲ್ಲಿ ಲಿಂಗ ಶಬ್ದವು ಭಿನ್ನಾರ್ಥದಲ್ಲಿದ್ದರೂ ಅದು ಆರ್ಯ ರಿಗೆ ಕುಚೇಷ್ಟೆಯ ಸಾಧನವಾಯಿತು. ಆ ವೇದದ ಅರ್ಥವನ್ನು ನೋಡಿ ಎಷ್ಟೋ ಅರಣ್ಯ ಪಂಡಿತರು ಲಿಂಗಗಳ ಆಕಾರವನ್ನು ಮನಸ್ಸಿನಲ್ಲಿ ತಂದು ಮೇಲಿನ ಗೋಲಕವು ಶಿಶ್ನವೆಂದೂ ಕೆಳಗಿನ ಪೀಠವು ಯೋನಿಯೆಂದೂ ಲಿಂಗ ಪೂಜಕರು ಶಿಶ್ನದೇವ ಪೂಜಕರೆಂದೂ ಅಪಾರ್ಥಮಾಡಿದಂತೆ ಕಂಡುಬರುತ್ತದೆ. ಆರ್ಯರು ದ್ರಾವಿಡರ ವೈರಿಗಳಾದ್ದರಿಂದ ಲಿಂಗ ಶಬ್ದಾ ರ್ಥದ ಮೂಲಕ ಆ ತರಹದ ಕುಚೇಷ್ಟೆ ಮಾಡಲು ಅವಕಾಶವುಂಟಲ್ಲದೆ ನಿಜವಾಗಿ ಲಿಂಗ ವಿಗ್ರಹಗಳು ಯೋನಿ ಶಿಶ್ನಗಳ ಚಿಹ್ನಗಳೆಂದು ಭಾವಿ ಸುವದು ಅತ್ಯಂತ ಲಾಂಛನಾಸ್ಪದವಾಗಿದೆ.

ಆರ್ಯರು ಮೊಟ್ಟಮೊದಲು ಲಿಂಗಗಳಿಗೆ 'ಶಿಶ್ನದೇವಾಃ' ಎಂದು ಕರೆಯಲಾರಂಭಿಸಲು ದ್ರಾವಿಡರು ಸಂತಪ್ತರಾಗಿ ಆರ್ಯರನ್ನು ಸಂಹಾರ ಮಾಡಿ ರಕ್ತದ ಕಾವಲಿಗಳನ್ನು ಹರಿಸಿರಬಹುದು. ಎತ್ತ ನೋಡಿದತ್ತ ರುಧಿರದ ಭೀಷಣ ದೃಶ್ಯವೇ ಕಂಡುಬರಲು ಆರ್ಯರು ಅತ್ಯಂತ ಭಯಭೀತರಾಗಿ ಶಿವನಿಗೆ ರುದ್ರ (ರುಧಿರ)ನೆಂಬ ಹೆಸರಿನಿಂದ ಕರೆಯ ಲಾರಂಭಿಸಿದರು. ರುದ್ರನೆಂದರೆ ಭೀಕರ ಅಥವಾ ಭಯಂಕರ. ದ್ರಾವಿ ಡರು ಆರ್ಯರಿಗೆ ಭೀಕರವಾಗಿ ಕಂಡದ್ದರಿಂದ ಅವರಿಗೆ ಅಸುರರೆಂದೂ ಶಿವನೂ ಭಯಂಕರನಾಗಿ ತೋರಿದ್ದರಿಂದ ರುದ್ರನೆಂದೂ ಅವರು ಕರೆ ದರು. 'ಶಿಶ್ನದೇವಾಃ' ಮತ್ತು 'ರುದ್ರ' ಈ ಶಬ್ದಗಳು ವೇದಗಳಲ್ಲಿ ಕಂಡುಬರುತ್ತವೆ. ವೇದಗಳಲ್ಲಿ ದ್ರಾವಿಡರಿಗೆ ಕಳ್ಳರು, ನೀಚರು, ಕಾಡರು, ಪಶುಗಳು ಎಂದು ಕರೆದಂತೆ ರುದ್ರನನ್ನೂ ಸ್ತೇನಾನಾಂ ಪತಿಃ, ತಸ್ಕರಾಣಾಂ

ಪತಿಃ, ಅರಣ್ಯಾನಾಂ ಪತಿಃ, ಪಶೂನಾಂ ಪತಿಃ ಇತ್ಯಾದಿಯಾಗಿ ವರ್ಣಿಸಿದ್ದುಂಟು. ದ್ರಾವಿಡರು ಆರ್ಯರಿಗೆ ಮೊದಲು ಚೆನ್ನಾಗಿ ಕೈತೋರಿಸಿದ್ದರಿಂದಲೇ ಅವರ ದೇವರನ್ನು ಕಂಡರೆ ಆರ್ಯರಿಗೆ ಅತ್ಯಂತ ಭೀತಿಯುಂಟಾಯಿತು. ಆ ಭಯದಿಂದ ಅವರು ರುದ್ರನನ್ನು ಮರೆಹೊಕ್ಕು ಆರಾಧಿಸಿದಂತೆ ಕಂಡುಬರುತ್ತದೆ. 'ರುದ್ರ' ಶಬ್ದವನ್ನು ಉಚ್ಚರಿಸಲಿಕ್ಕೆ ಮತ್ತು ಉಚ್ಚರಿಸಿದ್ದನ್ನು ಕೇಳಲಿಕ್ಕೆ ಆರ್ಯರು ಅಂಜಿ ಗದಗದ ನಡಗುತ್ತಿದ್ದರೆಂದು ವೇದಗಳಲ್ಲಿ ವರ್ಣನೆಯಿದೆ. ಅಂದಮೇಲೆ ಲಿಂಗಗಳಿಗೆ 'ಶಿಶ್ನದೇವಾ:' ಎಂದು ಕರೆದ ತಪ್ಪೇ ಆರ್ಯರಿಗೆ ಮುಳುವಾಯಿತು. ರುದ್ರನೆಂದರೆ ಅವರ ಎದೆ ಕೈಕಾಲುಗಳು ಥರಥರ ನಡಗುತ್ತಿದ್ದವು.

ಮುಂದೆ ಆರ್ಯರು ತಮ್ಮ ಮಂಗಗುಣಕ್ಕನುಸರಿಸಿ ಶಿವನಿಗೆ ಚೇಷ್ಟೆಮಾಡದೆ ಬಿಟ್ಟಿಲ್ಲ. ಯಜ್ಞದಲ್ಲಿ ಆಹುತಿಯನ್ನರ್ಪಿಸುವಾಗ ಇಂದ್ರಾದಿ ದೇವತೆಗಳಿಗೆ ಮೊದಲು ಕೊಟ್ಟು ಎಲ್ಲ ತೀರಿದನಂತರ 'ರುದ್ರಾಯ ಪಶುಪತಯೇ ಸ್ವಾಹಾ' ಎಂದು ಬರಿಗೈ ತೋರಿಸಿ ಹಾಸ್ಯಮಾಡುತ್ತಿದ್ದರು. ಬರಬರುತ್ತ ಆರ್ಯರು ಶಿವನಿಗೆ ಚೇಷ್ಟೆಗಾಗಿ ಸ್ಮಶಾನವಾಸಿ, ಕೃತ್ತಿವಾಸ, ಸಂಹಾರಕರ್ತ, ರುಂಡಮಾಲಾಧಾರಿ ಇತ್ಯಾದಿ ಹೆಸರುಗಳಿಂದ ಕರೆಯಲಾರಂಭಿಸಿದರು. ಆರ್ಯರಿಗೆ ಶಿವನು ಎಷ್ಟು ಭೀಕರನಾಗಿ ಕಂಡರೂ ಶೈವರಿಗೆ ಅರ್ಥಾತ್ ದ್ರಾವಿಡರಿಗೆ ಆತನು ಸರ್ವಮಂಗಳಕರನೂ ಕರುಣಾಸಮುದ್ರನೂ, ಶಾಂತಿಸಾಗರನೂ, ಮೋಕ್ಷದಾಯಕನೂ ಆಗಿದ್ದಾನೆ. ಅದರಂತೆಯೇ ದ್ರಾವಿಡರು ಶಿವನ ಗುಣಗಳನ್ನು ಎಲ್ಲೆಡೆಯಲ್ಲಿಯೂ ಜೋರಾಗಿ ಪ್ರಚಾರ ಮಾಡಹತ್ತಿದರು.

ಮುಂದೆ ಶೈವಪಂಥವು ಹೆಚ್ಚಾಗಿ ಬೆಳೆಯುತ್ತ ಹೋದಹಾಗೆ ಎಷ್ಟೋ ಆರ್ಯ ಋಷಿಗಳು ಆ ಪಂಥದಲ್ಲಿ ಸೇರಿಕೊಂಡರು. ಶಿವನು ಅವರಿಗೆ ಆರಾಧ್ಯದೇವತೆಯಾದನು. ಆ ಋಷಿಗಳು ಎಷ್ಟೋ ಉಪನಿಷತ್ತುಗಳನ್ನು ರಚಿಸಿದರು. ಆ ಉಪನಿಷತ್ತುಗಳಲ್ಲಿ ಶಿವನಿಗೆ ಪರಬ್ರಹ್ಮಸ್ಥಾನವು ಕೊಡಲ್ಪಟ್ಟಿತು. 'ಏಕೋ ಹಿ ರುದ್ರೋ ನ ದ್ವಿತೀಯಃ' ಎಂದು ಆರ್ಯ ಋಷಿಗಳು ಹಾಡಿಕೊಂಡರು. ಶ್ವೇತಾಶ್ವತರೋಪನಿಷತ್ತಿನಲ್ಲಿ ಶಿವನೇ ಪರವಸ್ತುವೆಂದು ಸಾರಿದ್ದಾಯಿತು. ಆಗಮಕಾಲದಲ್ಲಂತೂ ಶಿವನೇ ಸರ್ವಾಗಮಗಳ ಅಧಿನಾಯಕನಾದನು. ಎಷ್ಟೋ ಪುರಾಣ

ಗಳು ಶಿವೋಪಾಸನೆಯನ್ನೂ ಶಿವಲೀಲೆಗಳನ್ನೂ ಕೊಂಡಾಡಲಾರಂಭಿಸಿದವು. ಸ್ಥಾವರಲಿಂಗ ಪೂಜೆಯು ಹಾಸ್ಯಕ್ಕೆ ಗುರಿಯಾಗದೆ ಎಲ್ಲರ ಭಕ್ತಿ ಭಾವನೆಗಳಿಗೆ ಇಂಬುಗೊಟ್ಟಿತು. ಅಲ್ಲಲ್ಲಿ ಅನೇಕ ಶಿವಾಲಯಗಳು ಸ್ಥಾಪಿತವಾದವು. ವೇದಾಂತದಲ್ಲಿ ಪ್ರತಿಪಾದಿಸುವ 'ಶಿವಜೀವೈಕ್ಯ' ಶಬ್ದದಿಂದ ಶಿವನ ಪರಬ್ರಹ್ಮಸ್ವರೂಪವನ್ನು ಒಪ್ಪಿಕೊಂಡದ್ದಾಯಿತು. ಎಷ್ಟೋ ಬ್ರಾಹ್ಮಣರು ಶಿವನು ಬ್ರಾಹ್ಮಣ, ವಿಷ್ಣು ಕ್ಷತ್ರಿಯ, ಬ್ರಹ್ಮ ವೈಶ್ಯ, ಇಂದ್ರ ಶೂದ್ರನೆಂದು ಪ್ರತಿಪಾದಿಸಹತ್ತಿದರು. ಹರಿಹರರಲ್ಲಿ ಯಾರು ಹೆಚ್ಚೆಂಬ ಬಗ್ಗೆ ವಾಗ್ವಾದಗಳಾಗಿ ಹರನೇ ಅಧಿಕನೆಂದು ಬಹುಜನ ಪಂಡಿತರು ಪ್ರತಿಪಾದಿಸಿದರು. ಸೋತಂಥ ಕೆಲವು ಪಂಡಿತರು ಹರಿಹರರಲ್ಲಿ ಭೇದವನ್ನೆಣಿಸಬಾರದೆಂದು ಸಾರಿದರು. ಅಂತು ಯಾವ ಶಿವನಿಗೆ ವೇದಕಾಲದಲ್ಲಿ ಕೀಳ್ತನೆಯುಂಟಾಗಿದ್ದಿತೋ ಆತನೇ ಪುರಾಣ ಕಾಲದಲ್ಲಿ ಅತ್ಯಂತ ಶ್ರೇಷ್ಠ ದೇವತೆಯಾದನು. ಯಾವ ಇಂದ್ರನು ವೇದಕಾಲದಲ್ಲಿ ಅತ್ಯಂತ ಶ್ರೇಷ್ಠ ದೇವತೆಯಾಗಿದ್ದನೋ, ಯಾವನಿಗೆ ಅಗ್ರ ಆಹುತಿಯು ದೊರೆಯುತ್ತಿದ್ದಿತೋ, ಆತನು ಪುರಾಣಕಾಲದಲ್ಲಿ ಕನಿಷ್ಠ ದೇವತೆಯಾಗಿ ಶಿವ ವಿಷ್ಣುಗಳಿಗೆ ತಲೆವಾಗುವ ಪ್ರಸಂಗಬಂದಿತ ವೈಷ್ಣವ ಮತವು ಅರ್ಥಾತ್ ದ್ವೈತ ಸಿದ್ಧಾಂತವು ಶಿವಜೀವರಲ್ಲಿ ಭೇದವನ್ನು ಕಲ್ಪಿಸಿದರೂ ಶೈವಮತವು ಶಿವಜೀವರಲ್ಲಿ ಅಭೇದವನ್ನು ಸಾರಿ ಅದ್ವೈತ ಮತದ ಶ್ರೇಷ್ಠತೆಯನ್ನು ಜಗತ್ತಿಗೆ ಕಲ್ಪಿಸಿ ಕೊಟ್ಟಿತು.

ಈ ಪರಬ್ರಹ್ಮಸ್ವರೂಪಿಯಾದ ಶಿವನೇ ಮಹಾಲಿಂಗವೆಂದೂ ಆ ಜೀವನೇ ಅಂಗನೆಂದೂ ಹೆಸರಿಟ್ಟು ವೀರಶೈವ ಮತವು ಅದ್ವೈತ ಮತದಲ್ಲಿ ಕ್ರಾಂತಿಯನ್ನು ಮಾಡಿ 'ಶಕ್ತಿವಿಶಿಷ್ಟಾದ್ವೈತ'ವೆನಿಸಿಕೊಂಡಿತು. ಆ ಮಹಾಲಿಂಗವು ಚಿಚ್ಛಕ್ತಿಯನ್ನು ಕೂಡಿಕೊಂಡು ಭಾವ-ಪ್ರಾಣ ಇಷ್ಟರೂಪದಲ್ಲಿ ಜಗತ್ತಿನಲ್ಲಿ ವ್ಯಕ್ತವಾಯಿತು. ಅಂಗನು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಅವಸ್ಥೆಗಳುಳ್ಳಾತನಾಗಿ ಶ್ರದ್ಧಾ-ನಿಷ್ಠಾ-ಅವಧಾನ-ಅನುಭವ-ಸಮರಸ ಆನಂದಗಳೆಂಬ ಷಡ್ವಿಧ ಭಕ್ತಿಗಳಿಂದ ಕ್ರಮೇಣ ಆ ಇಷ್ಟ-ಪ್ರಾಣ-ಭಾವಲಿಂಗಗಳಲ್ಲಿ ಬೆರೆಯುತ್ತ ನಿರ್ವಯಲ ಸಮಾಧಿಯನ್ನು ಹೊಂದುವನೆಂಬ ಮತತತ್ವವು ಬೆಳಕಿಗೆ ಬಂದಿತು. ಇಂಥ ಶಿವನೇ ಅರ್ಥಾತ್ ಮಹಾಲಿಂಗವೇ ವೀರಶೈವರು ಆರಾಧಿಸುವ ಪರಾದೇವತೆಯು. ವೀರಶೈವರ ಶಿವನು ವೇದಗಳಲ್ಲಿ

ಹೇಳುವ 'ಶಿಶ್ನದೇವ'ನಲ್ಲ, ರುದ್ರನೂ ಅಲ್ಲ. ಪುರಾಣಕಾಲದಲ್ಲಿ ಹೇಳುವ ಸೃಷ್ಟಿಸಂಹಾರಕನೂ ಅಲ್ಲ. ಪಾರ್ವತೀಪತಿಯುಲ್ಲ. ಗಣಪತಿ ಷಣ್ಮುಖರ ತಂದೆಯುಲ್ಲ. ಶೈವರು ತೀರ್ಥಕ್ಷೇತ್ರಗಳಲ್ಲಿ ಸ್ಥಾಪಿಸಿದ ಆರಾಧ್ಯ ಸ್ಥಾವರ ಲಿಂಗವೂ ಅಲ್ಲ. ವೀರಶೈವರ ಶಿವನು ವ್ಯಕ್ತಿಗತವಾದ ಇಷ್ಟಲಿಂಗವು ಸಾಮೂಹಿಕವಾದ ಸ್ಥಾವರಲಿಂಗವಲ್ಲ. ಶ್ರೀಗುರುವು ತ್ರಿವಿಧ ದೀಕ್ಷೆ ಯಿಂದ ಶಿಷ್ಯನ ಮಸ್ತಕದ ಚಿತ್ಕಳೆಯುನ್ನು ಉರಸ್ಥಲಕ್ಕೆ ತಂದು ಅಲ್ಲಿಂದ ಅದನ್ನು ಕರಸ್ಥಲಕ್ಕೆ ಕರುಣಿಸಿಕೊಟ್ಟ ಚಿಹ್ನವೇ ಇಷ್ಟಲಿಂಗವು. ಆ ಕರ ಸ್ಥಲದ ಇಷ್ಟಲಿಂಗವನ್ನು ಭಕ್ತನು ಬಾಹ್ಯದಲ್ಲಿ ಪೂಜಿಸಿ ಪ್ರಾಣದಲ್ಲಿ ಅನುಸಂಧಾನ ಮಾಡಿ ಭಾವದಲ್ಲಿ ಬೆರೆದು ತನ್ಮಯುನಾಗುವದೇ ಪರ ತರಾನಂದವು. ಅದೇ ಐಕ್ಯವು ಅಥವಾ ಮೋಕ್ಷವು. ಇಂಥ ಲಿಂಗವೇ ಶಿವನೆಂದೂ ಇಂಥ ಶಿವನೇ ಸರ್ವ ದೇವ ಶಿಖಾಮಣಿಯೆಂದೂ ವೀರ ಶೈವರು ಹೇಳುವದುಂಟು.

ಶಿವನೇ ಸರ್ವೋತ್ತಮನೆಂದು ತಿಳಿದು ಆಚರಿಸುವವರು ವೀರ ಭಕ್ತರೆನಿಸಿಕೊಳ್ಳುವರು. ನಿಜವಾದ ವೀರಶೈವನು ಮೇಲೆ ನಿರೂಪಿಸಿದ ಲಿಂಗವನ್ನೇ ಪರಶಿವನೆಂದು ಆಚರಿಸಿದರೆ ಅವನಿಗೇ ವೀರಭಕ್ತನೆನ್ನ ಬೇಕು. ಹಾಗೆ ಆಚರಿಸುವದು ವೀರಶೈವನ ಮುಖ್ಯ ಕರ್ತವ್ಯವಾಗಿದೆ.

---

## ಗುರು ಲಿಂಗ ಜಂಗಮ.

( ಲೇಖಕ:— ಬಸಪ್ಪ ಚೆನ್ನಪ್ಪ ಪಟ್ಟೇದ. )

---

( ೪ )

( ಹಿಂದಿನ ಸಂಚಿಕೆಯಿಂದ ಮುಂದೆಸಾಗಿದ್ದು. )

**ಹುಸಿಯ ನುಡಿಯುಲು ಬೇಡಃ—** ಭಕ್ತರು ಹುಸಿ ನುಡಿಯುವ ದನ್ನು ಸರ್ವದಾ ತ್ಯಜಿಸಬೇಕು. ಅತ್ಯಂತ ಸತ್ಯವೂ ನಿತ್ಯವೂ ಆದ ಪರಮಾತ್ಮ ಸ್ವರೂಪವನ್ನು ಭಜಿಸಿ, ತದ್ರೂಪತೆಯು ಪಡೆಯು ಬಯುಸುವ ಭಕ್ತಂಗೆ ಹುಸಿಯೊಡನಾಟವು ಅತ್ಯಂತ ಲಜ್ಜಾಸ್ಪದವಾದುದು. ಈ ಬಗ್ಗೆ ವಚನಕಾರರು ಹೇಳುವದನ್ನು ಆಲಿಸಿರಿಃ—

೧ "ದಿಟವ ನುಡಿವುದು, ನುಡಿದಂತೆ ನಡೆವುದು, ಹುಸಿಯ ನುಡಿದು ತಪ್ಪುವ ಪ್ರಪಂಚಿಯನೊಲ್ಲ ಕೂಡಲ ಸಂಗಮದೇವ"

೨ "ಸತ್ಯವಿಲ್ಲದವರೊಡನೆ ಸಹಸ್ರಕ್ಕೊಮ್ಮೆ, ಲಕ್ಷಕ್ಕೊಮ್ಮೆ, ಕೋಟಿಗೊಮ್ಮೆಯಾದರೂ ನುಡಿಯಲಾಗದು. ಸುಡಲಿ ಅವರೊಡತನ ಮಾರಿಹೋಗಲಿ ಗುಹೇಶ್ವರ"

೩ "ಸತ್ಯದಲ್ಲಿ ನಡೆವುದು ಶೀಲ, ಸತ್ಯದಲ್ಲಿ ನುಡಿವುದು ಶೀಲ, ಸತ್ಯ ಸದಾಚಾರಗಳಲ್ಲಿ ವರ್ತಿಸಿ ಸತ್ಯವನರಿವುದೇ ಶೀಲ, ಕಾಣಿರೋ! ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ–"

ಹೀಗೆ ವಿಧವಿಧವಾಗಿ ಅನೇಕರು ಹಾಡಿದ್ದಾರೆ. ಆದರೂ ಈಗ ಹುಸಿ ನಡೆನುಡಿಗಳಿಗೆ ಅಳತೆಯೇ ಇಲ್ಲದಾಗಿದೆ. ವ್ಯವಹಾರದಲ್ಲಿಯೂ ಕೋರ್ಟ ಕಚೇರಿಗಳಲ್ಲಿಯೂ ಸುಳ್ಳು ಮಾತಿನ ಸಾಕ್ಷಿಗಳನ್ನು ಬೇಕಾದಷ್ಟು ಕಾಣಬಹುದು. ಅಲ್ಪ ಸ್ವಲ್ಪ ಆಶೆ ತೋರಿಸಿದರೆ ಸಾಕು, ಸುಳ್ಳಿಗೆ ಸಂಪೂರ್ಣ ಮೈಗೊಡುವರು. ಇದು ಭಕ್ತರಿಗೆ ಬಹು ಬಾಧಕವು. ಆದುದರಿಂದ ಹುಸಿಯನ್ನು ಬಿಟ್ಟು ಯಾವಾಗಲೂ ಸತ್ಯವಾದ ನಡೆನುಡಿಗಳನ್ನೇ ಅನುಸರಿಸಬೇಕು. ವ್ಯವಹಾರೋದ್ಯೋಗಗಳಲ್ಲಿ ಬಹಳ ಪ್ರಾಮಾಣಿಕತನದಿಂದ ನಡೆಯಬೇಕು. ಸತ್ಯಕ್ಕಿಂತ ಮಿಗಿಲಾದ ಧರ್ಮವೇ ಇಲ್ಲ. "ಸತ್ಯದಿಂದಲೆ ಜಗದ ಸಂಸ್ಥಿತಿ, ಸತ್ಯದಿಂದಲೆ ಧರ್ಮ ಸಂಸ್ಥಿತಿ......" ಇತ್ಯಾದಿ ಅದನ್ನು ಹೊಗಳಿದ್ದಾರೆ.

**ಮುನಿಯಬೇಡ:—** ಮುನಿಯುವದೆಂದರೆ ಸಿಟ್ಟಾಗುವದು. ಸಿಟ್ಟು ಕಾಮದ (ಆಶೆಯ) ಕೂಸು. "ಕಾಮಾತ್ಕ್ರೋಧೋಽಭಿಜಾಯತೇ" ಎಂದು ಭಗವದ್ಗೀತೆಯು ಹೇಳುತ್ತದೆ. ಭಕ್ತರು ಅಹಂಕಾರ ಆಶೆಗಳನ್ನು ತೊರೆದು ಲಿಂಗೈಕ್ಯರಾಗಲಿಕ್ಕೆ ಹವಣಿಸುವರು. ಆದುದರಿಂದ ಲೌಕಿಕ ಹಾನಿ ವೃದ್ಧಿಗಳಿಗೆ ಅಷ್ಟೊಂದು ಮೈಗೊಡದೆ, ತಮ್ಮ ಗುರಿಯ ಕಡೆಗೇ ಹೆಚ್ಚಾಗಿ ಗಮನಿಸಬೇಕು. ಅದಕ್ಕೆ ಸಹಾಯವಾಗಬೇಕಾದರೆ ಅವರು ಮುನಿಸನ್ನು ನೀಗಲೇಬೇಕು. ಸಾಧಕರಿಗೆ ಕೋಪವು ಅತ್ಯಂತ ಘಾತಕವು. ಭಕ್ತರು ನಿರಂತರ ಶಾಂತಿ ಸ್ಥೈರಣೆಗಳನ್ನು ಅನುಸರಿಸುವದರಲ್ಲಿಯೇ ಇಷ್ಟವುಳ್ಳವರಾಗಿರಬೇಕು. ಸಿಟ್ಟಿನ ವಿಷಯದಲ್ಲಿ ಶ್ರೀ ಬಸವಣ್ಣನವರು:—

"ತನಗೆ ಮುನಿವರಿಗೆ ತಾನು ಮುನಿಯಲೇಕಯ್ಯ! ತನಗಾದಡೇನು? ಅವರಿಗಾದಡೇನು? ತನುವಿನ ಕೋಪ ತನ್ನ ಹಿರಿಯತನದ ಕೇಡು, ಮನದ ಕೋಪ ತನ್ನ ಅರುವಿನ ಕೇಡು. ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡದು. ಕೂ. ಸಂ. ದೇವ" ಎಂದು ಹೇಳಿದ್ದಾರೆ. ಭಕ್ತರಾದವರೆಲ್ಲರು ಶಿವಸ್ವರೂಪವಾಗಿರುವದರಿಂದ ಯಾರು ಯಾರಮೇಲೆ ಸಿಟ್ಟಾಗಬೇಕು? ಕೋಪಗೊಳ್ಳುವದು ಅಜ್ಞಾನದ ಗುರುತು. ಇದರಂತೆಯೇ ಅನ್ಯರು ತನ್ನನ್ನು ನಿಂದಿಸಿದರೂ ಕೂಡ ಎಷ್ಟುಮಾತ್ರವೂ ಸಿಟ್ಟಿಗೇಳದೆ ಶಾಂತರೀತಿಯಿಂದ ಸಹಿಸಬೇಕೆಂದು ಅಣ್ಣನವರು ಹೇಳಿರುವರು.—

"ಕಾಣದ ಠಾವಿನಲ್ಲಿ ಜರಿದರೆಂದರೆ, ಕೇಳಿ ಪರಿಣಾಮಿಸಬೇಕು. ಅದೇನು ಕಾರಣ? ಕೊಳ್ಳದೆ ಕೊಡದೆ ಅವರಿಗೆ ಸಂತೋಷವಾಗುವದಾಗಿ. ಎನ್ನ ಮನದ ತದ್ವೇಷವಳಿದು ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು ಕೂ. ಸಂ. ದೇ."

ಇವುಗಳನ್ನು ಲಕ್ಷಿಸಿದರೆ ಯಾವ ಕಾರಣದಿಂದಲೂ ಸಿಟ್ಟಿನ ಕೈಯಲ್ಲಿ ಬುದ್ಧಿಕೊಡಬಾರದೆಂಬುದು ಸ್ಪಷ್ಟವಾಗುತ್ತದೆ. ಸಿಟ್ಟಿನ ಯೋಗದಿಂದ ಸಮಾಜದಲ್ಲಿ ಅದೆಂತಹ ಭಯಂಕರ ಅನಾಹುತಗಳಾಗುತ್ತವೆಂಬದನ್ನು ದಿನಾಲು ನೋಡೇನೋಡುತ್ತೇವೆ. ಆ ಕಾರಣ ಯತ್ನ ಪೂರ್ವಕ ಸಿಟ್ಟನ್ನು ತೊರೆಯುವದೇ ಇಷ್ಟವಾದುದು.

**ಅನ್ಯರಿಗೆ ಅಸಹ್ಯಪಡಬೇಡಃ—** ಭವಿಗಳಲ್ಲಿ ಉಚ್ಚತ್ವ ನೀಚತ್ವ ಸ್ಪೃಶ್ಯಾಸ್ಪೃಶ್ಯತೆಗಳು ಇರುವವಷ್ಟೇ! ಅವೆಲ್ಲ ಅಹಂಕಾರದ ಪರಮಾವಧಿ ಲಕ್ಷಣ. ಅನ್ಯರು ತನಗಿಂತ ಕೀಳಾದವರೆಂದು ತಿಳಿದು ಅವರನ್ನು ಎಂದೂ ಹೀಯಾಳಿಸಬಾರದು. ನಿಜವಾಗಿ ಯಾರೂ ಮೇಲಲ್ಲ ಕೀಳಲ್ಲ; ಎಲ್ಲರೂ ಸರಿಸಮಾನರು. ಈ ವಿಷಯವಾಗಿ ವಚನ ಶಾಸ್ತ್ರವು ಹೇಳುವದೇನಂದರೆ:—

೧. "ಎಂತಹನಾದಡೇನು? ಲಿಂಗ ಮುಟ್ಟಿದವನೇ ಕೀಳುಜಾತಿ. ಕುಲವಹುದು ತಪ್ಪದು ಲಿಂಗ ಮುಟ್ಟಲೊಡನೆ ..... ಕೂ. ಸಂ. ದೇವ."

೨. "ಹೊಲೆ ಗಂಡಲ್ಲದೆ ಪಿಂಡದ ನೆಲೆಗೆ ಆಶ್ರಯವಿಲ್ಲ. ಜಲಬಿಂದುವಿನ ವ್ಯವಹಾರ ಒಂದೇ. ಆಶೆ ಆಮಿಷ ಹರುಷ ವಿಷಯಾದಿ

ಗಳೆಲ್ಲ ಒಂದೇ. ಏನನೋದಿ ಏನು ಕೇಳಿದರೇನು ಫಲ? ಕುಲಜನೆಂಬು ದಕ್ಕೆ ಆವುದು ದೃಷ್ಟ?......ಕೂ. ಸಂ. ದೇವ ಲಿಂಗಸ್ಥಲವನರಿದವನೇ ಕುಲಜ".

ಎಂದು ಅಣ್ಣನವರು ಸ್ವಚ್ಛವಾಗಿ ಹೇಳಿಬಿಟ್ಟಿದ್ದಾರೆ. ಹುಟ್ಟಿನಿಂದ ಎಲ್ಲರೂ ಸಮಾನರಾಗಿರುವರು. ಅವರಲ್ಲಿ ಅನೇಕರು ವೇದಶಾಸ್ತ್ರಾದಿ ಗಳನೋದಿದರೂ ಕೇಳಿದರೂ ಕೂಡ, ಲಿಂಗವುಟ್ಟದಿದ್ದರೆ (ಆತ್ಮೋ ದ್ಧಾರವಾಗುವ ಸುಜ್ಞಾನ ಸದಾಚಾರಿಗಳು ಪ್ರಾಪ್ತಿಸದಿದ್ದರೆ) ಅದೆಲ್ಲ ವ್ಯರ್ಥವೆಂದೂ, ಅವರು ಇತರರಿಗಿಂತ ಮೇಲಾದವರಾಗರೆಂದೂ ಅಪ್ಪಣೆ ಕೊಡಿಸಿದ್ದಾರೆ. ಅಂದಮೇಲೆ ಅನ್ಯರನ್ನು ತಿರಸ್ಕರಿಸುವ ಹಕ್ಕು ಅದಾ ರಿಗೆ ಬರುವದು? ಪರಿಣತ ಜ್ಞಾನಿಗಳಂತೂ ಎಲ್ಲವನ್ನೂ ಐಕ್ಯರೂಪ ದಲ್ಲಿ ಕಾಣುವದಲ್ಲವೇ? ಒಟ್ಟಿಗೆ ಜ್ಞಾನಿಗಳಿರಲಿ, ಅಜ್ಞಾನಿಗಳಿರಲಿ, ಯಾರೂ ಪರರ ವಿಷಯವಾಗಿ ಅಸಹ್ಯಪಡಲಿಕ್ಕೆ ಕಾರಣವೇ ಇಲ್ಲ. ಇದಲ್ಲದೆ--

"ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಇದ್ದಿತ್ತೇ? ಒಡೆಯರ ಪ್ರಾಣಕ್ಕೆ ಇದ್ದಿತ್ತೇ ಯಜ್ಞೋಪವೀತ! ಕಡೆಯಲ್ಲಿದ್ದ ಅಂತ್ಯಜನು ಹಿಡಿ ದಿದ್ದನೇ ಕೈಯಲ್ಲಿ ಹಿಡಿಗೋಲ? ನೀನಿಕ್ಕಿದ ತೊಡಕನು ಈ ಲೋಕದ ಜಡರೆತ್ತ ಬಲ್ಲರು ರಾಮನಾಥ!"

ಎಂದು ದೇವರದಾಸಿಮಯ್ಯಗಳು ಕೇಳುತ್ತಾರೆ. ಇವೆಲ್ಲ ಮಾನವ ಕೃತ ಭೇದಗಳು; ನಿಜವಾದುದಲ್ಲ. ಕೇವಲ ಸ್ವಾರ್ಥಪರ ಕಲ್ಪನೆಗಳು. ಇಂತಹ ಭೇದಭಾವನೆಯೇ ಮಾಯಾಮಲವೆಂದು ಹೇಳಲ್ಪಡುತ್ತದೆ. ತ್ರಿಮಲಗಳಲ್ಲಿ ಅದೊಂದಾಗಿದೆ. ನಿರ್ಮಾಯನಾಗುವದೇ ಭಕ್ತನ ಕರ್ತವ್ಯ. ಆಕಾರಣ ಸರ್ವರನ್ನು ಮುಖ್ಯವಾಗಿ ಭಕ್ತರನ್ನು ಸಮಭಾವನೆಯಿಂದಲೇ ಕಾಣುವದು ಅತ್ಯವಶ್ಯ. ನಮ್ಮ ಪಂಚಾಚಾರವಾದರೂ ಇದನ್ನೇ ಹೇಳು ತ್ತದೆ. ಬಸವಣ್ಣನವರು:--

"ವಿಭೂತಿ ರುದ್ರಾಕ್ಷಿಯುಳ್ಳವರ ಲಿಂಗವೆಂಬೆ. ಅಂಗಲಿಂಗ ಸಹಿತ ಮನೆಗೆ ಬಂದರೆ ನೀನೆಂದು ನಂಬುವುದೆನ್ನಮನವು"

ಎಂದು ಮೈಯುಬ್ಬಿ ಹಾಡಿಕೊಂಡಿದ್ದಾರೆ. ಆದುದರಿಂದ ಶಿವ ಭಕ್ತರು ಎಲ್ಲರಲ್ಲಿಯೂ ಆದರಣೆ ಸಹನೆಗಳುಳ್ಳವರಾಗಬೇಕು. ಒಬ್ಬರ

ಉತ್ಕರ್ಷದಿಂದ ತಾನು ಸಂತೋಷವುಳ್ಳವನಾಗಬೇಕೇ ವಿನಾ ಮತ್ಸರ ಗ್ರಸ್ತನಾಗಕೂಡದು. ಎಲ್ಲವೂ ತನಗೇ ಆಗಬೇಕೆಂಬ ರಾಕ್ಷಸೀಯ ಭಾವನೆಯುಳ್ಳ ಭವಿಗಳು ಮಾತ್ರ, ಅನ್ಯರ ಬಗ್ಗೆ ಅಸಹ್ಯತೆಯನ್ನು ಧರಿಸಬಹುದು. ವೀರಶೈವರು ಅದನ್ನು ಸಂಪೂರ್ಣ ವರ್ಜ್ಯಪಡಿಸತಕ್ಕದ್ದು ಅತ್ಯವಶ್ಯ.

**ತನ್ನ ಬಣ್ಣಿಸಬೇಡಃ—** ಯಾರೇ ಆಗಲಿ, ತಮ್ಮ ಸ್ತುತಿಯನ್ನು ತಾವೇ ಮಾಡಿಕೊಳ್ಳುವದು ಎಷ್ಟುಮಾತ್ರವೂ ಸರಿಯಲ್ಲ. ಅದು ಅಹಂಕಾರವನ್ನೇ ವ್ಯಕ್ತಮಾಡುತ್ತದೆ. ಅಹಂಕಾರವು ಭಕ್ತರಿಗೆ ಎಂದೂ ಎಷ್ಟುಮಾತ್ರವೂ ಸಲ್ಲದು. ಶ್ರೀಬಸವಣ್ಣನವರಂತೂ.—

"ಆತ್ಮಸ್ತುತಿ, ಪರನಿಂದೆ, ಕೇಳಿಸದಿರಯ್ಯ ನಿಮ್ಮ ಧರ್ಮ. ಆನು ಭಕ್ತನು, ಎನ್ನಲ್ಲಿ ಲೇಸುಂಟೆಂದು ಪರಿಣಾಮಿಸಿದರೆ ನಿಮಗಾನುದ್ರೋಹಿಯಯ್ಯ ಕೂ. ಸಂ. ದೇವಾ ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯ."

ಎಂದು ಬೇಡಿಕೊಂಡಿದ್ದಾರೆ. ಅನ್ಯರ ಗುಣಗಳನ್ನು ಕಂಡು ಬಣ್ಣಿಸುವದು ಲೌಕಿಕ ಸಾಂಪ್ರದಾಯವಾಗಿದ್ದರೂ, ಅದು ಕೂಡ ತ್ಯಾಜ್ಯವೆಂದೇ ಆ ಮಹಾನುಭಾವರು ತಮ್ಮ ಬೇರೊಂದು ವಚನದಲ್ಲಿ ವ್ಯಕ್ತಗೊಳಿಸಿದ್ದಾರೆಃ—

೧ "ಎನ್ನವರೊಲಿದು ಹೊನ್ನ ಶೂಲಕ್ಕೆ ಇಕ್ಕಿದರಯ್ಯ ಎನ್ನ ಹೊಗಳಿ ಹೊಗಳಿ. ಅಯ್ಯೋ ನಿಮ್ಮ ಮನ್ನಣೆಯೇ ಮಸೆದಲಗಾಗಿ ತಾಗಿತ್ತಯ್ಯ. ಅಯ್ಯೋ ನೊಂದೆನು, ಸೈರಿಸಲಾರೆನು. ಕೂ. ಸಂ. ದೇವ"

೨ "ಎನ್ನವರೊಲಿದು ಹೊನ್ನ ಶೂಲಕ್ಕಿಕ್ಕಿದರಯ್ಯ! ಅಹಂಕಾರ ಪೂರಾಯ ಗಾಯದಲ್ಲಿ ಅದೆಂತು ಬದುಕುವೆನೆಂತು ಜೀವಿಸುವೆ! ಜಂಗಮವಾಗಿ' ಬಂದು ಜರಿದು ಶೂಲವನಿಳುಹಿ ಪ್ರಸಾದದ ಮದ್ದನಿಕ್ಕಿ ಸಲಹು ಕೂ. ಸಂ. ದೇವ."

ತಾನು ಹೆಚ್ಚಿನವನೆಂದು ಭಕ್ತನು ಸಹಸಾ ಬಯಸಕೂಡದೆಂದು, ಈ ವಚನಗಳಿಂದ ಚೆನ್ನಾಗಿ ವ್ಯಕ್ತವಾಗುತ್ತದೆ. ಅವನು ಯಾವಾಗಲೂ ಭೃತ್ಯ (ವಿನಯ) ಭಾವವನ್ನೇ ತಾಳಬೇಕು. ನಮ್ಮ ಪಂಚಾಚಾರಗ

ಳಲ್ಲಿ ಭಕ್ತರಿಗೆಲ್ಲ ಈ ಭೃತ್ಯಾಚಾರವು ಒಂದು ಮುಖ್ಯ ಆಚಾರವಾಗಿ ಬೋಧಿತವಾಗಿದೆ. ಇನ್ನು ಶ್ರೀ ಬಸವಣ್ಣನವರ ಭೃತ್ಯಾಚಾರವನ್ನು ನೋಡಿರಿಃ—

“ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ. ಕೂ. ಸಂ. ದೇವಾ ಎನಗಿದೇ ದಿಬ್ಯ ”

ಈ ವಚನದಲ್ಲಿ ಅಣ್ಣನವರು ವ್ಯಕ್ತಪಡಿಸಿದಂತೆ ಪ್ರತಿಯೊಬ್ಬನು– ಗುರು ಜಂಗಮರು ಸಹ ತಾನು ಎಲ್ಲರಿಗಿಂತ ಕಿರಿಯನೆಂದೇ ಅಂತಃ ಕರಣದಲ್ಲಿ ಧೃಡವಾಗಿ ನಂಬಿರಬೇಕು. ಅದರಂತೆ ಅನ್ಯರನ್ನು ಯಾವಾ ಗಲೂ ಆದರ ಭಾವದಿಂದಲೇ ಕಾಣುತ್ತಿರಬೇಕು. ಇದೇ ಭಕ್ತರ ಉದ್ಧಾರಕ್ಕೆ ಸಹಾಯಕಾರಿಯಾದುದು.

**ಇದಿರ ಹಳಿಯಲು ಬೇಡಃ—** ತನ್ನ ಹೊಗಳಿಕೊಳ್ಳುವದು ಅದೆಷ್ಟು ಮೂರ್ಖತನವಾಗುವದೋ ಅಷ್ಟೇ ಇನ್ನೊಬ್ಬರನ್ನು ಹಳಿಯು ವದಾದರೂ ಮೂರ್ಖತನವಾಗುತ್ತದೆ. ಜಗತ್ತಿನಲ್ಲಿ ಯಾರೂ ಪೂರ್ಣತ್ವ ವುಳ್ಳವರಿಲ್ಲ. ಒಂದಿಲ್ಲೊಂದು ರೀತಿಯಿಂದ ಕೊರತೆ ಎಂಬುದು ಸರ್ವ ರಲ್ಲಿಯೂ ಇದ್ದೇ ಇರುವದು; ಇನ್ನು ಕೆಲವರಲ್ಲಿ ಹೆಚ್ಚಾಗಿರಬಹುದು ಇಷ್ಟೆ! ಅಷ್ಟರಿಂದಲೇ ಅವರನ್ನು ಕಂಡು ಧಿಕ್ಕರಿಸಿ ನುಡಿಯುವದು ಇಲ್ಲವೆ ನಡೆಯುವದು ಸುಜ್ಞತನವಾಗಲಾರದು. ಅವರ ದೋಷಗಳು ಅಜ್ಞಾನಮೂಲಕವಾಗಿದ್ದರೆ, ತಿಳಿಹೇಳಿ ಅವನ್ನು ಹೋಗಲಾಡಿಸಬೇಕು. ಬಡತನದಿಂದುಂಟಾಗಿದ್ದರೆ, ತನ್ನಿಂದಾದಷ್ಟು ಸಹಾಯ ಮಾಡಿ ದೂರೀ ಕರಿಸಲು ಯತ್ನಿಸಬೇಕು. ಅಂಗವೈಕಲ್ಯ ಮೂಲಕವಿದ್ದರೆ, ಸಹಾನು ಭೂತಿಯಿಂದ ಕನಿಕರಪಟ್ಟು ನೆರವಾಗಬೇಕು. ಮನಸ್ಸು ಯಾವಾಗಲೂ ಇದಿರು ನೋಡುವ ಸ್ವಭಾವವುಳ್ಳದು. ತನ್ನಲ್ಲಿ ದೋಷಗಳಿಷ್ಟಿದ್ದರೂ ಅವು ಅದಕ್ಕೆ ಕಾಣುವದೇ ಇಲ್ಲ. ಆದುದರಿಂದಲೇ ಶ್ರೀ ಬಸವೇಶ್ವರ ದೇವರು ಅದನ್ನು—

“ತನ್ನ ವಿಚಾರಿಸಲೊಲ್ಲದೀ ಮನವು. ಇದಿರ ವಿಚಾರಿಸಹೋಹು ದೀಮನವು. ಏನ ಮಾಡುವೆನೀ ಮನವನು? ಎಂತು ಮಾಡುವೆನೀ ಮನವನು? ಕೂಡಲಸಂಗನ ಶರಣರು ಮೆಚ್ಚದ ಮನವನು?”

ಎಂದು ಹೀಯಾಳಿಸಿರುವರು. ಪರರನ್ನು ನಿಂದಿಸುವದರಿಂದ ಅದಾವ ಲಾಭವೂ ಆಗದೆ, ಅವರ ಮನವನ್ನು ನೋಯಿಸಿ ದ್ವೇಷಮಾತ್ರ ಕಟ್ಟಿ ಕೊಳ್ಳಲಿಕ್ಕೆ ಕಾರಣವಾಗುವದು. ಎಲ್ಲರೂ ಶಿವರೂಪವಿರುವದರಿಂದ, ಆದರದಿಂದಲೂ ಸೇವ್ಯ ಬುದ್ಧಿಯಿಂದಲೂ ಕಾಣಬೇಕು. ಪ್ರತಿಯೊಬ್ಬನಲ್ಲಿ ನಿಂದ್ಯ ಗುಣಗಳು ಹಲಕೆಲವಿರುವಂತೆ, ಅನೇಕ ವಂದ್ಯ ಗುಣಗಳೂ ಇರುವವು. ಅವನ್ನು ನಾವು ನೋಡಿ ಆ ಬಗ್ಗೆ ಸಂತೋಷಭರಿತರಾಗ ಬೇಕು. ಛಿದ್ರಗಳನ್ನೇ ಹುಡುಕಿ ಅವನ್ನೇ ಎತ್ತಿ ಹಳಿಯುತ್ತ ಹೋಗು ವದು ದುಷ್ಟತನವು. ಭಕ್ತನು ಯಾವಾಗಲೂ ವಿನಯಶೀಲನಾಗಿರ ಬೇಕು. ಈ ಬಗ್ಗೆ ಶ್ರೀ ಬಸವಣ್ಣನವರುಃ—

"ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ. ಮೃದುವಚನವೇ ಸಕಲ ಜಪಂಗಳಯ್ಯ. ಮೃದುವಚನವೇ ಸಕಲ ಜಪಂಗಳಯ್ಯ. ಸದು ವಿನಯವೇ ಸದಾಶಿವನ ಒಲುಮೆಯಯ್ಯ. ಕೂ. ಸಂ. ದೇವ."

ಎಂದು ನುಡಿದಿದ್ದಾರೆ. ಇದನ್ನು ಬಗೆದರೆ ಸಕಲರೊಡನೆ ವಿನ ಯದಿಂದಲೇ ನಡೆದುಕೊಳ್ಳಬೇಕೆಂಬುದು ವ್ಯಕ್ತವಾಗುತ್ತದೆ. ಹಳಿಯು ವದು ಬಹು ಕೀಳುತನವೂ ಅಜ್ಞಾನದ ಪರಮಾವಧಿಯೂ ಆಗಿರುವದು. ಅದನ್ನು ಭಕ್ತರು ಸಂಪೂರ್ಣ ಬಿಟ್ಟುಬಿಡಬೇಕು.

ಈಮೇರೆಗೆ ಆರಂಭದಲ್ಲಿ ಕೊಟ್ಟ "ಕಳಬೇಡ......" ಎಂಬ ವಚ ನದ ಸ್ಥೂಲಮಾನದ ಸ್ಪಷ್ಟೀಕರಣವಾಯಿತು. ಮನುಷ್ಯನು ನೀತಿಯನ್ನು ತೊರೆದು ನಡೆಯಲಿಕ್ಕೆ ಮುಖ್ಯವಾಗಿ ಅವನ ಸ್ವಾರ್ಥಬುದ್ಧಿಯೇ ಕಾರ ಣವು. ವಿಷಯಭೋಗಲಾಲಸೆಯೇ ಅವನನ್ನು ಗತಿಗೆಡಿಸುವದು, ಬತ ಗೆಡಿಸುವದು. ಹೊನ್ನು ಹೆಣ್ಣುಗಳ ಮೋಹವೇ ಅವನಿಗೆ ಹೆಚ್ಚಾಗಿ ಅನಿವಾರ್ಯವಾದುದು. ಆಕಾರಣ ಪರಧನ ಪರಸ್ತ್ರೀಯ ವಿಷಯವಾಗಿ ಭಕ್ತನು ಅತ್ಯಂತ ಶುದ್ಧನಾಗಿರಬೇಕೆಂದು ವಚನಶಾಸ್ತ್ರವು ಬಹು ಪರಿ ಯಿಂದ ಬೋಧಿಸುತ್ತದೆ. ಹೆಣ್ಣಿನ ವಿಷಯವಾಗಿ ತುಸು ಹೆಚ್ಚಾಗಿ ಇಲ್ಲಿ ವಿವರಿಸುವದು ಅಪ್ರಾಸಂಗಿಕವಾಗಲಾರದೆಂದು ನೆನಿಸುತ್ತೇನೆಃ— ಒಬ್ಬ ಮನುಷ್ಯ ಬಹು ದ್ರವ್ಯ ವೆಚ್ಚಮಾಡಿ ಸ್ವೀಕರಿಸಿದ ವನಿತೆಯನ್ನು ಮತ್ತೊಬ್ಬನು ಅಪಹರಿಸುವದು ಅನೇಕ ರೀತಿಯಿಂದ ಅಪರಾಧಕ್ಕೆ ಕಾರಣವಾಗುತ್ತದೆ. (೧) ಆಕೆಯ ಪಾತಿವ್ರತ್ಯವನ್ನು—ದೇಹ ಪಾವಿತ್ರ್ಯ

ವನ್ನು— ಕದ್ದಂತಾಗುವದು. (೨) ಅವಳ ಹಾಗು ಅವಳ ಪತಿ ಮುಂತಾದ ಸಂಬಂಧಿಕರ ಮಾನಭಂಗ ಒದಗುವದು. (೩) ದ್ವೇಷಾಗ್ನಿಯುನ್ನು ಹುಟ್ಟಿಸಿ ಹೊತ್ತಿಸಿ ಪ್ರಜ್ವಲಿಸಲಿಕ್ಕೆ ಮಾರ್ಗಮಾಡಿಟ್ಟಂತಾಗುವದು. (೪) ಸಮಾಜ ಶಾಂತತೆಯುನ್ನು ಹಾಳುಮಾಡಿ ಅನರ್ಥಕ್ಕೆ ಗುರಿಮಾಡಿದ ದೋಷ ಬೆಂಬಳಿಸುವದು. (೫) ತನ್ನ ಪ್ರಪಂಚವನ್ನೂ ನಾಶಗೊಳಿಸಿ ಹಾಳು ಮಾಡಿಕೊಳ್ಳುವದಲ್ಲದೆ, ಅವಳ ಹಾಗು ಅವಳ ಗಂಡನ ಘಾತಮಾಡಿ ದಂತೆಯೂ ಆಗುವದು. ಇತ್ಯಾದಿ. ಈ ಪರಸತಿ ವ್ಯಸನದ ಬಳಿವಿಡಿದು ಕಳವು ಕೊಲೆ ಹುಸಿಗಳು ಆಮಂತ್ರಿಸಿದಂತೆ ಬಂದು ಸೇರಿಕೊಳ್ಳುವವು. "ತನ್ನ ಮೂಗು ಕೊಯ್ದುಕೊಂಡು ಅನ್ಯರಿಗೆ ಅಪಶಕುನ ಮಾಡುವ ದೆಂ"ದರೆ ಇದೇ! ಈ ಬಗ್ಗೆ ಬಸವೇಶರದೇವರುಃ—

೧ "ಹೋಗಬಿಟ್ಟು ಮರಳಿ ಹಿಂದೆ ನೋಡಿ, ಮತ್ತಾಗಬೇಕೆಂಬ ಸಂದೇಹವುಳ್ಳನ್ನಕ್ಕ ಅದೇ ಪರದಾರ! ನಾಯಕನರಕ ತಪ್ಪದು. ಅನ್ಯವಧು ವೆಂಬುದು ಕೂ. ಸಂ. ದೇವಾ ನಿಮ್ಮ ರಾಣಿವಾಸ"

೨ "ನೋಡಲಾಗದು, ನುಡಿಸಲಾಗದು, ಪರಸ್ತ್ರೀಯರ ಬೇಡ ಕಾಣಿರೋ. ತಗರ ಬೆನ್ನಲ್ಲಿ ಹರಿದ ಸೊಣಗನಂತೆ ಬೇಡ ಕಾಣಿರೋ. ಒಂದಾಸೆಗೆ ಸಾವಿರ ವರುಷ ನರಕದಲದ್ದುವ ಕೂ. ಸಂ. ದೇವ."

೩ "ಹರಿವ ಹಾವಿಂಗಂಜೆ, ಉರಿಯ ನಾಲಿಗೆಗಂಜೆ, ಸುರಿಗೆಯ ಮೊನೆಗಂಜೆ, ಒಂದಕ್ಕಂಜುವೆ ಒಂದಕ್ಕಳಕುವೆ. ಮುನ್ನಂಜದ ರಾವ ಣನೇವಿಧಿಯಾದ? ಅಂಜುವೆನಯ್ಯ ಕೂ. ಸಂ. ದೇವ."

ಎಂದು ಅತ್ಯಂತ ನಿರ್ದಾಕ್ಷಿಣ್ಯವಾಗಿ ಹೇಳಿದ್ದಾರೆ. ಅದರಂತೆಯೇ ಚೆನ್ನಬಸವಣ್ಣನವರುಃ—

"ದಾಸಿಯ ಸಂಗ ಕಸ-ನೀರು ಹೊರಿಸಿತ್ತು. ವೇಶಿಯ ಸಂಗ ಎಂಜ ಲುತಿನಿಸಿತ್ತು. ಪರಸ್ತ್ರೀಯರ ಸಂಗ ಪಂಚಮಹಾಪಾತಕ ತಂದಿತ್ತು. ಈ ತ್ರಿವಿಧವು ನಾಸ್ತಿಯಾದಲ್ಲದೆ ಭಕ್ತನಲ್ಲ. ಭಕ್ತಿಯಿಲ್ಲದೆ ಮುಕ್ತಿಗೆ ಸಲ್ಲ. ನಮ್ಮ ಕೂ. ಚೆ. ಸಂಗನಲ್ಲಿ."

ಇದೇ ಮೇರೆಗೆ ಶಿವಲೆಂಕ ಮಂಚಣ್ಣನವರುಃ—

"ಪರಧನವನೊಲ್ಲದಿಪ್ಪುದೇ ವ್ರತ, ಪರಸ್ತ್ರೀಯರ ಕೂಡದಿಪ್ಪುದೇ ಶೀಲ, ಸರ್ವಜೀವನ ಕೊಲ್ಲದಿಪ್ಪುದೇ ನೇಮ, ತಥ್ಯವ ಮಿಥ್ಯವ ತಿಳಿದಿ

ಷ್ಪದೇ ನಿತ್ಯನೇಮ. ಇದು ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗಕ್ಕೆ ಸಂದೇಹವಿಲ್ಲದ ವ್ರತ. "

ಎಂದು ಬೋಧಿಸಿದ್ದಾರೆ. ಈ ಮೇಲೆ ವಿವರಿಸಿದಂತೆ ಅನಿಷ್ಟವ ತೊರೆದು, ಇಷ್ಟವನು ಆಚರಿಸಿ, ಇಷ್ಟಲಿಂಗ ಪೂಜಾಪರನಾಗಿ ಭಕ್ತನು ನಡೆದುಕೊಂಡರೆ, ಅವನ ಹಾಗು ಸಾಮಾಜಿಕ (ಸಮಷ್ಟಿ) ಗುರು ಪೂಜೆಯೂ ಸಹಜವಾಗಿಯೇ ನೆರವೇರುವದು. ಭಕ್ತೋದ್ಧಾರವೂ ಆಗುವದು. ಸಮಾಜಾದಿಗಳ ಉದ್ಧಾರವೂ ಆಗುವದು. ಇದಕ್ಕಿಂತ ಮಿಗಿಲಾದುದು ಇನ್ನಾವುದಿರುವದು!

(ಮುಂದುವರಿಯುವದು.)

---

## ರಾವಬಹಾದ್ದೂರ ಹಳಕಟ್ಟಿಯವರಿಗೋಸ್ಕರ ಮಾನಪತ್ರ ಸಮಾರಂಭವು.

---

ತಾ॥ ೧೧ ಮತ್ತು ೧೨ ನೇ ಅಕ್ಟೋಬರ ತಾರೀಖುಗಳಲ್ಲಿ ರಾಣೇಬೆನ್ನೂರಲ್ಲಿ ಧಾರವಾಡ ಜಿಲ್ಲಾ ಸಾಹಿತ್ಯ ಪರಿಷತ್ತು ಪ್ರೊ॥ ವ್ಹಿ. ಕೆ. ಗೋಕಾಕ ಇವರ ಅಧ್ಯಕ್ಷತೆಯಲ್ಲಿ ಸೇರಿದ್ದಿತು. ಪರಿಷತ್ತಿನ ಉದ್ಘಾಟನ ಸಮಾರಂಭವನ್ನು ರಾ॥ ಬ॥ ಪಿ. ಜಿ. ಹಳಕಟ್ಟಿಯವರು ನೆರವೇರಿಸಿದರು. ಅವರು ರಾಣೇಬೆನ್ನೂರಿಗೆ ಬಂದ ಈ ಸಮಯದಲ್ಲಿ ಅಲ್ಲಿಯ ಮಹಾಜನರು ಪ್ರೊ॥ ವ್ಹಿ. ಕೆ. ಗೋಕಾಕ ಇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಅವರಿಗೆ ಮಾನಪತ್ರವನ್ನು ಕೊಡುವ ಸಮಾರಂಭವನ್ನು ನೆರವೇರಿಸಿದರು. ಈ ಕಾಲಕ್ಕೆ ಪಟ್ಟಣಿಗರು ಮಾತ್ರವಲ್ಲದೆ ಪರಿಷತ್ತಿಗೆ ಬಂದ ಮಹನೀಯರನೇಕರು ಸಭೆಗೆ ಬಂದಿದ್ದರು. ಸಭೆಯು ಶ್ರೀ ಬಸವದೇವರು ಪುಟ್ಟಯ್ಯನಮಠ ಇವರ ಭವ್ಯವಾದ ಮಠದಲ್ಲಿ ಸೇರಿದ್ದಿತು.

ಲ್ಲಿ ವಾರ್ಷಿಕೋತ್ಸವವಿದ್ದುದರಿಂದ ಅದಕ್ಕೋಸ್ಕರ ಶ್ರೀಮನ್ನಿರಂಜನ ಮೃತ್ಯುಂಜಯ ಸ್ವಾಮಿಗಳು ಧಾರವಾಡ, ಶ್ರೀ ಸಿದ್ಧವೀರ ಸ್ವಾಮಿಗಳು ವಿರಕ್ತಮಠ ಮು. ದಾವಣಗೆರೆ ಮೊದಲಾದ ಅನೇಕ ಸ್ವಾಮಿಗಳೂ ಆಗಮಿಸಿದ್ದರು.

ಮಾನಪತ್ರವನ್ನು ಪಟ್ಟಣದ ಪ್ರಮುಖ ನಾಗರಿಕರೂ ಜಿಲ್ಲಾ ಸ್ಕೂಲ್ ಬೋರ್ಡಿನ ಚೇರಮನ್ನರೂ ಆದ ಶ್ರೀಯುತ ಸಿದ್ದಪ್ಪ ಬಣಗಾರ ಇವರು ಓದಿ ಸುಂದರವಾದ ಬಳ್ಳಿಯ ಕರಂಡದಲ್ಲಿ ರಾ|| ಬ|| ಹಳಕಟ್ಟಿಯವರಿಗೆ ಅರ್ಪಿಸಿದರು. ಆ ಮೇಲೆ ರಾವಬಹಾದ್ದೂರವರು ರಾಣೇಬೆನ್ನೂರು ಮತ್ತು ಈ ಭಾಗದಲ್ಲಿ ಪ್ರಚಾರ ಹೊಂದುತ್ತಲಿರುವ ಶಿವಾನುಭವದ ಚಟುವಟಿಕೆಗಳನ್ನು ಶ್ಲಾಘಿಸುತ್ತ ಪಟ್ಟಣಿಗರ ಬಗ್ಗೆ ತಮಗಿರುವ ಕೃತಜ್ಞತೆಯನ್ನು ತೋರಿಸಿದರು. ಪ್ರೊ|| ಗೋಕಾಕರವರು ರಾ| ಬ| ಹಳಕಟ್ಟಿಯವರು ಮಾಡಿದ ವಾಙ್ಮಯ ಸೇವೆಯನ್ನು ಬಹಳವಾಗಿ ಸ್ತುತಿಸಿದರು. ಆ ಮೇಲೆ ಶ್ರೀಮನ್ನಿರಂಜನ ಮೃತ್ಯುಂಜಯ ಸ್ವಾಮಿಗಳವರು ಬೋಧಪರ ಭಾಷಣ ಮಾಡಿದರು. ಈ ಪ್ರಕಾರ ಈ ಮಾನಪತ್ರ ಸಮಾರಂಭವು ಉತ್ತಮ ರೀತಿಯಿಂದ ಜರಿಗಿತು. ಮಾನಪತ್ರದ ವಿವರವು ಕೆಳಗೆ ಕೊಡಲ್ಪಟ್ಟಿದೆ.

## ಮಾನಪತ್ರವು.

**ಕರ್ನಾಟಕದಲ್ಲಿ ಕಡು ಪರಿಚಿತರಾಗಿರುವ ಮಹನೀಯರೇ,**

ಧಾರವಾಡ ಜಿಲ್ಹೆಯ ಐದನೆಯ ಸಾಹಿತ್ಯ ಸಮ್ಮೇಲನವನ್ನು ಪ್ರಾರಂಭಿಸುವ ಮಹತ್ವದ ಕಾರ್ಯಕ್ಕೆ ಆಗಮಿಸಿದ ತಮ್ಮ ಸುಮಂಗಲ ಸುಸಮಯವನ್ನು ಸಾಧಿಸಿ ರಾಣೇಬೆನ್ನೂರ ಪುರನಿವಾಸಿಗಳಾದ ನಾವು ಪುರಪರವಾಗಿ ತಮಗೆ ಹೃತ್ಪೂರ್ವಕವಾಗಿ ಮಮತೆಯ ಮರ್ಯಾದೆಯ ಓಲೆಯನ್ನು ( ಮಾನಪತ್ರ ) ಸಮರ್ಪಿಸಲು ಮುಂದುವರಿದಿರುತ್ತೇವೆ. ನಾವು ಕೈಕೊಂಡ ಈ ಕಾರ್ಯಕ್ಕೆ ತಾವು ಹುಟ್ಟಿ ನಾಡಿನಲ್ಲಿ ಮಾಡಿದ ಬಗೆ ಬಗೆಯ ನೀಟವೂ ಮಾಟವೂ ಆದ ಒಳ್ಳೆಯ ಉಜ್ವಗಗಳೇ ಕಾರಣವಾಗಿರುತ್ತವೆಂದು ವಿದಿತಪಡಿಸುತ್ತೇವೆ.

**ಸೂಜ್ಞರೇ,**

ಕರ್ನಾಟಕದಲ್ಲಿ ಬಹು ದಿನಗಳ ಹಿಂದೆ ಪದವೀಧರರಾಗಿ ನಾಡಿಗೆ ಶೋಭೆಯನ್ನು ತಂದವರಲ್ಲಿ ತಾವೊಬ್ಬರು. ಪದವೀ ಪ್ರಾಪ್ತಿಯಲ್ಲಿ ಸಂಪಾದಿಸಿದ ಶಿಕ್ಷಣವನ್ನು ಅವ್ಯಾಹತವಾಗಿ ಮುಂದುವರಿಸಿ, ಜ್ಞಾನ ಭಾಂಡಾರದ ಕ್ಷೇತ್ರವನ್ನು ವಿಸ್ತರಿಸಿ, ಅದರ ಉಪಯೋಗವನ್ನು ಹೆಚ್ಚಾಗಿ ಜನತೆಗೆ ನೀಡಿದವರಲ್ಲಿ ತಾವೊಬ್ಬರು. ಸಂಶೋಧನದಲ್ಲಿ ಮನಸ್ಸು ಹಾಕಿ, ಬಿಡುವಿಲ್ಲದಂತೆ ಕೆಲಸ ಮಾಡಿ ಅದರಲ್ಲಿ ಸಫಲತೆ ಹಾಗೂ ಯಶಸ್ಸು ಪಡೆದವರಲ್ಲಿ ತಾವೊಬ್ಬರು. ತಾವು ಮೊಟ್ಟಮೊದಲು ವಕೀಲಿಯ ಉದ್ಯೋಗದಲ್ಲಿ ತೊಡಗಿ, ಅದರಲ್ಲಿ ತಕ್ಕ ಯಶೋಭಾಗಿಗಳಾಗಿ ಇರುತ್ತಿರುವಾಗ ಒಮ್ಮೆಲೇ ಉದ್ಯೋಗದ ದಿಕ್ಕು ಬದಲಿಸಿ, ಈಗ ಮುಂದುವರಿದಿರುವ ಹಾಗೂ ಪ್ರಕಾಶಮಯವಾಗಿರುವ ಉಜ್ವಗದಲ್ಲಿ ಮನಸ್ಸುಹಾಕಿದಿರಿ. ಇದು ತಮ್ಮಲ್ಲಿಯ ಒಂದು ವೈಶಿಷ್ಟ್ಯವಾಗಿರುವದು. ತಮ್ಮ ಮನಸ್ಸಿನ ಕ್ರಾಂತಿಯು ತಮ್ಮಯ ಈಗಿನ ಉಜ್ವಲ ಚರಿತ್ರಕ್ಕೆ ಕಾರಣವಾಗಿ, ಕರ್ನಾಟಕಕ್ಕೆ ವಿಧವಿಧದ ಸಹಾಯವನ್ನುಂಟು ಮಾಡಿರುವದು.

**ಶಿಕ್ಷಣಾಭಿಮಾನಿಗಳೇ,**

ತಮ್ಮ ಶಿಕ್ಷಣದಲ್ಲಿಯ ಜ್ಞಾನ, ತಮ್ಮ ಶಿಕ್ಷಣದಲ್ಲಿಯ ಅಭಿಮಾನ, ತಮ್ಮ ಶಿಕ್ಷಣದ ನಿರ್ವ್ಯಾಜ ಧ್ಯಾನ, ಇವು ನಿಜವಾಗಿಯೂ ಬಣ್ಣಿಸತಕ್ಕವು! ಅಂತೆಯೇ ಇವುಗಳಿಂದ ತಾವು ಎಲ್ಲೆಡೆಯಲ್ಲಿಯೂ ಗೌರವವನ್ನು ಪಡೆದಿರುವಿರಿ. ತಮ್ಮ ಸದ್ಯದ ನೆಲೆವೀಡಾಗಿರುವ ವಿಜಾಪುರದಲ್ಲಿ ವೀರಶೈವ ಶಿಕ್ಷಣ ಫಂಡು, ಸಿದ್ಧೇಶ್ವರ ಧರ್ಮಾದಾಯ ಶಿಕ್ಷಣ ಫಂಡು ಶೇಖರಿಸಿ, ಅದರ ಒಳ್ಳೆರವಿನಿಂದ ಜಿಲ್ಹಾ ವೀರಶೈವ ವಿದ್ಯಾವರ್ಧಕ ಸಂಘ, ಸಿದ್ಧೇಶ್ವರ ಮಾಧ್ಯಮಿಕ ಶಾಲೆ ಮೊದಲಾದವುಗಳನ್ನು ಸ್ಥಾಪಿಸಿ, ಇವುಗಳ ಹಿರಿಯತನವನ್ನು ವಹಿಸಿ ಇವುಗಳ ಉತ್ಕರ್ಷಕ್ಕೆ ನಿಚ್ಚ ಹೆಚ್ಚಿನ ಉಚ್ಚ ಪ್ರಯತ್ನ ಮಾಡುತ್ತಿರುವಿರಿ. ಈ ಮೊದಲು ಬಹು ದಿನಗಳ ವರೆಗೆ ವಿಜಯಪುರದ ನಗರಸಭೆಯ ಶಾಲಾ ಸಂಘದ ಒಡೆಯರಾಗಿ, ಅತ್ಯಂತ ದಕ್ಷತೆಯಿಂದ–ಆಸ್ಥೆಯಿಂದ–ನಿಷ್ಕಲಂಕ ಪ್ರೇಮದಿಂದ–ನಿರಿಚ್ಛೆಯಿಂದ ಕೆಲಸ ಮಾಡುತ್ತ ಶಿಕ್ಷಕ, ಶಿಕ್ಷಿಕೆಯರಲ್ಲಿ ಒಂದು

ಬಗೆಯ ಉತ್ಸಾಹವನ್ನು ಹುಟ್ಟಿಸಿ ಶಿಕ್ಷಣದಲ್ಲಿ ಅನೇಕ ಏರ್ಪಾಡು ಮಾರ್ಪಾಡುಗಳನ್ನು ಮಾಡಿರುವಿರಿ. ಸರಕಾರದವರು ನಿಯಮಿಸಿದ ಪ್ರಾಥಮಿಕ ಶಿಕ್ಷಣ ಮಂಡಲ, ಕನ್ನಡ ಪಠ್ಯ ಪುಸ್ತಕ ಮಂಡಲ, ಪ್ರಾಥಮಿಕ ಶಾಲಾ ಅಭ್ಯಾಸ ಪತ್ರಿಕಾ ಮಂಡಲ, ಕನ್ನಡ ಸಂಶೋಧನ ಮಂಡಲ, ಮುಂಬಯಿ ವಿಶ್ವವಿದ್ಯಾಲಯ ಮೊದಲಾದ ಅನೇಕ ಶೈಕ್ಷಣಿಕ ಮಂಡಲಗಳಲ್ಲಿ ಸದಸ್ಯರಾಗಿ ಉಪಯುಕ್ತ ಕಾರ್ಯ ಮಾಡಿರುವಿರಿ–ಮಾಡುತ್ತಿರುವಿರಿ. ಒಟ್ಟಿಗೆ ಇಲಾಖೆಯಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಪ್ರತಿಯೊಂದು ಉಚ್ಚ ಸಂಸ್ಥೆಯಲ್ಲಿ ತಮ್ಮ ಅಂಗವಿಲ್ಲೆಂದು ಹೇಳಲಿಕ್ಕೆ ಬರುವಂತಿಲ್ಲ.

**ಮಹಾನುಭಾವರೇ,**

ನಿಮ್ಮ ಕಾರ್ಯಕ್ಷೇತ್ರವು ಎಷ್ಟು ವ್ಯಾಪಕವಾಗಿರುತ್ತದೆಂಬುವದಕ್ಕೆ ನಿಮ್ಮ ಪ್ರತಿಷ್ಠೆಯು ಎಷ್ಟು ಉಜ್ವಲವಾಗಿರುತ್ತದೆಂಬುವದಕ್ಕೆ ಬಳ್ಳಾರಿಯ ಕರ್ನಾಟಕ ಸಾಹಿತ್ಯ ಪರಿಷತ್ತಿಗೆ, ಧಾರವಾಡದಲ್ಲಿ ಆದ ಕರ್ನಾಟಕ ಏಕೀಕರಣ ಪರಿಷತ್ತಿಗೆ, ಪುಣೆಯಲ್ಲಿ ಜರುಗಿದ ನೇಕಾರ ಪರಿಷತ್ತಿಗೆ, ಧಾರವಾಡದಲ್ಲಿ ಜರುಗಿದ ವೀರಶೈವ ಮಹಾಸಭೆಗೆ ತಾವು ಅಧ್ಯಕ್ಷರಾದದ್ದು, ಕಳೆದ ವರ್ಷ ತಮ್ಮ ೭೪ ನೆಯ ವರ್ಷದ ವರ್ಧಂತ್ಯುತ್ಸವವು ವಿಜಾಪುರದಲ್ಲಿಯೂ ಬೇರೆ ಗ್ರಾಮಗಳಲ್ಲಿಯೂ ಅತ್ಯುತ್ಸಾಹದಿಂದ–ವಿಜೃಂಭಣೆಯಿಂದ ಸಾಂಗವಾದದ್ದೂ, ನಿಧಿಯನ್ನು ಸಲ್ಲಿಸಿದ್ದೂ ಪ್ರತ್ಯಕ್ಷ ದ್ಯೋತಕಗಳಾಗಿವೆ.

**ಕನ್ನಡ ಸಾಹಿತ್ಯಾಭಿಮಾನಿಗಳೇ,**

ಮೇಲೆ ಮಂಡಿಸಿದ ಕಾರ್ಯಗಳಲ್ಲದೆ ನೀವು ಕರ್ನಾಟಕದಲ್ಲಿ ಮಾಡಿದ ಸಾಹಿತ್ಯ ಸೇವೆಯು ಎಂದೂ ಮರೆಯದ್ದಾಗಿದೆ. ನೀವು ಮಾಡಿದ ಆ ಸೇವೆಯು ನಿಜವಾಗಿಯೂ ಅಮರವಾಗಿ ಉಳಿಯುವದೆಂದರೆ ಅತ್ಯುಕ್ತಿಯಾಗಲಾರದು! ಬಹು ದಿವಸಗಳಿಂದ ಮನೆ. ಮಠ ಮೊದಲಾದವುಗಳಲ್ಲಿ ಕಗ್ಗತ್ತಲೆಯೊಳಗೆ ಹುಳಹತ್ತಿ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದ-ಹುದುಗಿಕೊಂಡಿದ್ದ ವಚನ ಭಂಡಾರವನ್ನು ಬೈಲಿಗೆ ಹಾಕಿ-ಬೆಳ

ಕಿಗೆ ತಂದು-ಸರಿಪಡಿಸಿ-ಕ್ರಮಗೊಳಿಸಿ-ಪ್ರಸಾರಗೊಳಿಸಿ ಕನ್ನಡಿಗರಿಗೆ ಅವೆರೌಲ್ಯ ವಚನ ಸಾಹಿತ್ಯಾಮೃತವನ್ನು ಉಣ್ಣಿಸಿರುವಿರಿ-ಉಣ್ಣಿಸುತ್ತಿರುವಿರಿ. ವಚನ ಸಾಹಿತ್ಯದಂಥ ಓಜಸ್ವಿಯೂ, ತೇಜಸ್ವಿಯೂ ಆದ ಸ್ಫೂರಣದಾಯಕ ಜ್ಞಾನ ಭಾಂಡಾರವು ಮತ್ತೊಂದಿಲ್ಲ. ಒಟ್ಟಿಗೆ ತಮ್ಮ ಆಯುಷ್ಯದ ಬಹು ಭಾಗವು ವಚನ ಸಾಹಿತ್ಯವನ್ನು ಆರಿಸಿ-ಆರಿಸಿ ಪ್ರಕಾಶಗೊಳಿಸುವದರಲ್ಲಿಯೇ ವಿೀಸಲು ತೆಗೆದಂತಾಗಿದೆ. ನೀವು ಸಾಗಿಸುತ್ತಿರುವ " ಶಿವಾನುಭವ ಪತ್ರಿಕೆಯು ಕಳೆದ ೧೮ ವರ್ಷಗಳಿಂದ ವೀರಶೈವ ಸಾಹಿತ್ಯ-ವೀರಶೈವ ಇತಿಹಾಸ-ತತ್ವ ಮೊದಲಾದವುಗಳನ್ನು ಸರಳವಾಗಿ ಸ್ಪಷ್ಟವಾಗಿ ವಿಮರ್ಶಿಸುತ್ತ ಸಕಲ ಜಾತಿಯ ಗುಣ ಗ್ರಾಹಕ ಸೂಜ್ಞ ಬಾಂಧವರಿಗೆ ತುಂಬಾ ಪ್ರಿಯಕರವೂ ಆಕರ್ಷಕವೂ ಆಗಿರುವದು. ಅದರಂತೆಯೇ, ತಾವು ಹೊರಡಿಸುತ್ತಿರುವ ನವಕರ್ನಾಟಕ' ಪತ್ರಿಕೆಯಾದರೂ ಜನ ಪ್ರಿಯವಾಗಿರುವದು. ಸಂತತ ಅವಿರತ ಶ್ರಮವನ್ನು ವಹಿಸಿ, ಸರ್ವ ವಚನಕಾರರ-ಪುರಾತನ ಪ್ರತಿಭಾ ಶಾಲಿಗಳಾದ ಗ್ರಂಥಕಾರರ ಹೆಚ್ಚು ಕಡಿಮೆ (೬೦) ಗ್ರಂಥಗಳನ್ನು ಪ್ರಕಾಶಗೊಳಿಸಿ ಸಾಹಿತ್ಯದಲ್ಲಿ ಹೊಸ ಬೆಳಕನ್ನು ಉಂಟು ಮಾಡಿರುವಿರಿ. ಅವುಗಳಲ್ಲಿ ಎಷ್ಟೋ ಗ್ರಂಥಗಳು ಮುಂಬಯಿ ವಿದ್ಯಾಖಾತೆಯಿಂದಲೂ ಮುಂಬಯಿ, ಮೈಸೂರ ವಿಶ್ವವಿದ್ಯಾಲಯಗಳಲ್ಲಿಯೂ ಮಾನ್ಯವಾಗಿ ಪಠ್ಯಪುಸ್ತಕಗಳಾಗಿವೆ.

**ಮಾನ್ಯರೇ,**

ಒಟ್ಟಿಗೆ ನೀವು ಮಾಡಿದ ಕಾರ್ಯಗಳು ಉಜ್ವಲವಾಗಿರುವವು; ಉಪಯುಕ್ತವಾಗಿರುವವು. ಸಂಸ್ಮರಣೀಯವಾಗಿರುವವು. ದೇವರು ತಮಗೆ ಉದ್ದಂಡಾಯುಷ್ಯವನ್ನು ದಯಪಾಲಿಸಲೆಂದೂ, ಆರೋಗ್ಯ ಸಂಪದವನ್ನು ಹೆಚ್ಚಿಸಲೆಂದೂ ಪ್ರಾಂಜಲವಾಗಿ ಬೇಡುತ್ತೇವೆ. ಹಾಗೂ ತಮ್ಮಿಂದ ಕರ್ನಾಟಕಕ್ಕೆ ಇನ್ನೂ ಘನತರವಾದ ಬಗೆಬಗೆಯ ಸೇವೆ ಸಲ್ಲಲೆಂದೂ ಉತ್ಕಟೇಚ್ಛೆಯನ್ನು ವ್ಯಕ್ತ ಮಾಡುತ್ತೇವೆ.

**ಶ್ರೀ. ಎಸ್ ಕೆ. ಬಣಗಾರ.** ಶ್ರೀ ವ್ಹಿ. ಎಸ್. ಹಿರೇಮಠ, ಶ್ರೀ ಎಸ್. ಬಿ. ಹನಗೋಡಿಮಠ, ಶ್ರೀ ಬಿ. ಎಮ್. ಅಂಕಲಕೋಟೆ,

ಶ್ರೀ ಕೇ. ಸಿ. ಎಮ್ಮಿ, ಶ್ರೀ ಕೇ ಎಮ್. ಹರಪನಹಳ್ಳಿ, ಶ್ರೀ ಕೆ. ಕೆ. ಆನಿಸೆಟ್ಟರ, ಶ್ರೀ ಆರ್ ಕೆ. ಮುರಿಯಾನಿ, ಶ್ರೀ ಶಾಂತಪ್ಪ ನಗರಕರ, ಶ್ರೀ ಎನ್ ಜೀ. ಪಾಟೀಲ, ಶ್ರೀ ಮೂಲಚಂದ ಕೇಸಾಜಿ, ಶ್ರೀ ಸಿ. ಎಸ್. ಕುರವತ್ತಿ, ಶ್ರೀ ಜಮಾಲಖಾನ ನದ್ದೀಮುಲ್ಲಾ, ಶ್ರೀ ಡಿ. ಟಿ. ಮಿರಜಕರ, ಶ್ರೀ ಸಿ. ಎಸ್. ಬೆಂಗಳೂರ, **ಶ್ರೀ ರಾ. ಬ ಎಸ್ ಎಸ್ ನಾಯಿಕ.** ಶ್ರೀ ಎಸ್. ಎಮ್. ಮಳಿಮಠ, ಶ್ರೀ ಬಿ. ಬಿ. ಬೂದಿಹಾಳಮಠ, ಶ್ರೀ ಬಿ. ಟಿ. ಗುಡ್ಡದ, ಶ್ರೀ ಪಿ. ಸಿ. ಸಿ. ಬದಾಮಿ, ಶ್ರೀ ಸಿ. ಎಸ್. ಜಂಬಿಗಿ, ಶ್ರೀ ವ್ಹಿ. ಸಿ. ರಿತ್ತಿಸೆಟ್ಟರ, ಶ್ರೀ ಎಸ್. ಎಮ್. ನಾಯಿಕ, ಶ್ರೀ ಶಿವರುದ್ರಪ್ಪ ಹೆದ್ದೇರಿ, ಶ್ರೀ ಚನಬಸನಗೌಡ ಪಾಟೀಲ, ಶ್ರೀ ಸಿ. ಜಿ ಕುರವತ್ತಿ, ಶ್ರೀ ಎಮ್. ಡಿ. ನಾಯಿಕ, ಶ್ರೀ ಬಿ. ಕೆ. ಕುರವತ್ತಿ, ಶ್ರೀ ಕೆ. ವ್ಹಿ. ಮಠಪತಿ, **ಶ್ರೀ ಖಾ. ಸಾ. ಎಸ್. ಎನ್. ಫೌಜದಾರ.** ಶ್ರೀ ಆರ್. ಜಿ. ಅಜ್ಜೆವಡಿ ಮಠ, ಶ್ರೀ ಬಿ. ಜಿ. ಜೊಯಿಸಿ, ಶ್ರೀ ಟಿ. ಎಫ್. ಮೆಹರವಾಡೆ, ಶ್ರೀ ಜಿ. ಬಿ. ಗುರನ್ನಿ, ಶ್ರೀ ಟಿ. ಬಿ. ಪಾಸ್ತೆ, ಶ್ರೀ ಕೆ. ವ್ಹಿ. ಆನಿಸೆಟ್ಟರ, ಶ್ರೀ ಜಿ. ಡಿ. ನಾಯಿಕ, ಶ್ರೀ ಗುಡ್ಡಪ್ಪ ತಾಸಿಲ್ದಾರ, ಶ್ರೀ ಸೈಯದಮೀರ ಪಾಟೀಲ, ಶ್ರೀ ಎನ್ ಎಸ್. ನೂರಂದೇವರಮಠ, ಶ್ರೀ ಎಮ್. ಬಿ. ಕಟ್ಟಿಮನಿ, ಶ್ರೀ ಸಿ. ಬಿ. ಮಾಕನೂರ, ಶ್ರೀ ಎನ್. ಎಮ್. ಹೊಸಂಗಡಿ, ಶ್ರೀ ಡಾ. ಎಸ್. ಜಿ. ಪಾಟೀಲ.

**ರಾಣೇಬೆನ್ನೂರ, ದಿನಾಂಕ, ೧೯೪೪ ನೆಯ ಅಕ್ಟೋಬರ ೧೨ ಗುರುವಾರ.**

●

---

# ವೀರಶೈವರಿಗೋಸ್ಕರ ಸ್ವತಂತ್ರ ಕಾನೂನು.

ಈ ಮಹತ್ವದ ವಿಷಯವು ವೀರಶೈವರ ಲಕ್ಷವನ್ನು ಈಚಿಗೆ ಎಳೆದಿದೆ. ವೀರಶೈವರು ತಮಗೊದಗುವ ಹಾನಿಯನ್ನು ಕಾಯದೆಯ ದ್ವಾರಾ ದೂರಮಾಡಿಕೊಳ್ಳಬಹುದಾಗಿದೆ. ಯೋಗ್ಯ ಕಾಯದೆಯನ್ನು ಮಾಡಿಕೊಳ್ಳುವ ಈಗಿನ ಸಂಧಿಯನ್ನು ಅವರು ಕಳೆದುಕೊಳ್ಳಬಾರದು. ಅವರು ತಮಗೆ ಅನ್ವಯಿಸಬಹುದಾದ ಕಾಯದೆಯ ನಿಜಸ್ಥಿತಿಯನ್ನು ಗೊತ್ತುಪಡಿಸುವ ಭಾರವನ್ನು ಕೋರ್ಟುಗಳ ಮೇಲೆ ಒಗೆಯದೆ, ಅದಕ್ಕೆ ನಿಶ್ಚಿತ ಸ್ವರೂಪನ್ನು ಕೊಟ್ಟು ಒಂದು ಆ್ಯಕ್ಟಿನ ಮೂಲಕ ತಾವೇ ತಮಗುಂಟಾಗುವ ಹಾನಿಯನ್ನು ದೂರ ಮಾಡಿಕೊಳ್ಳಬೇಕು. ಇದು ಅವರ ಪ್ರಗತಿಯ ದ್ಯೋತಕವಾಗಿದೆ. ಯಾಕಂದರೆ ಸಮಾಜದಲ್ಲಿ ಆಗುವ ಬದಲಾವಣೆಗಳಿಗನುಸರಿಸಿ ಕಾಯದೆಯಲ್ಲಿಯೂ ಬದಲಾವಣೆಗಳಾಗುವದು ಅವಶ್ಯವೂ ಸಮಾಜಾಭಿವೃದ್ಧಿಗೆ ಸಹಾಯಕವೂ ಆಗುವದರಲ್ಲಿ ಏನೂ ಸಂದೇಹವಿರಲಾರದು.

ಸರಕಾರದವರು ‘ ರಾವ ಕಮಿಟಿ’ ಎಂಬ ಹೆಸರಿನಿಂದ ಒಂದು ಕಾಯದೆಯ ತಜ್ಞ ಮಂಡಳಿಯನ್ನು ಕೆಲವು ವರ್ಷಗಳ ಹಿಂದೆ ನಿಯಮಿಸಿದರು. ಈ ಮಂಡಳಿಯವರು ಹಿಂದೂ ಕಾಯದೆಯಲ್ಲಿ ಮಾರ್ಪಾಡುಗಳನ್ನು ಮಾಡುವ ವಿಷಯವಾಗಿ ಮಾಡಿದ ಸೂಚನೆಗಳು ಕೇಂದ್ರ ಕಾಯದೆ ಮಂಡಳದಲ್ಲಿ ವಿಚಾರಕ್ಕೋಸ್ಕರ ಬಂದಿವೆ. ಅವು ಅಂಗೀಕೃತವಾದರೆ ಹಿಂದೂ ಸಮಾಜವೆಲ್ಲ ಅವುಗಳಿಗೆ ಬದ್ಧವಾಗುತ್ತಿದೆ. ಕಮೀಟಿಯವರು ಇಷ್ಟರಲ್ಲಿ ‘ ಹಿಂದೂ ವಾರಸಾ ಬಿಲ್ಲು’ ಮತ್ತು ‘ ಹಿಂದೂ ವಿವಾಹ ಬಿಲ್ಲು ’ ಎಂದು ಎರಡು ಬಿಲ್ಲುಗಳನ್ನು ಸಿದ್ಧಪಡಿಸಿದ್ದಾರೆ. ಈಗ ಪ್ರಚಲಿತವಿರುವ ಹಿಂದೂ ಕಾಯದೆಯಲ್ಲಿ ವೀರಶೈವರಿಗೆ ಶೂದ್ರ ಕಾಯದೆಯು ಹಚ್ಚಲ್ಪಡುವದರಿಂದ ಕೋರ್ಟುಗಳಲ್ಲಿ ಅವರಿಗೆ ಬಹಳ ಅನ್ಯಾಯಗಳಾಗಿರುತ್ತವೆ. ಆದರೆ ರಾವ ಕಮೀಟಿಯವರು ಈ ಭೇದವನ್ನು ಮನ್ನಿಸದೆ ಎಲ್ಲರಿಗೂ ಅನ್ವಯಿಸುವಂತೆ ಈ ಬಿಲ್ಲನ್ನು ಸಿದ್ಧಪಡಿಸಿದ್ದಾರೆ. ಇದರಿಂದ ವೀರಶೈವರಲ್ಲಿ ರಂಡೀ ಮಕ್ಕಳಿಗೆ ವಾರಸಾ

ಹಕ್ಕು ದೊರೆಯುವ ಈಗಿನ ಪದ್ಧತಿಯು ನಷ್ಟವಾಗುವದೆಂದು ಭಾವಿಸಲ್ಪಟ್ಟಿದೆ. ಸ್ತ್ರೀಯರಿಗೆ ಹೆಚ್ಚಿನ ಮತ್ತು ಸ್ವತಂತ್ರವಾದ ಹಕ್ಕುಗಳಿರಬೇಕೆಂಬುದು ಇನ್ನೊಂದು ಮಹತ್ವದ ಬದಲಾವಣೆಯು ಈ ಬಿಲ್ಲುಗಳಲ್ಲಿದೆ. ಪ್ರಕೃತ ಹಿಂದೂ ಸಮಾಜಸ್ಥಿತಿಯಲ್ಲಿ ಇದು ಬಹುಜನ ಸಮ್ಮತಿಯನ್ನು ಹೊಂದಬಹುದಾಗಿದೆ. ವೀರಶೈವರ ತತ್ವದ ಪ್ರಕಾರ ಸ್ತ್ರೀಯರಿಗೆ ಪುರುಷರಿಗಿರುವಷ್ಟೇ ಅಧಿಕಾರಗಳಿವೆ. ಆದ್ದರಿಂದ ಈ ಬದಲಾವಣೆಗೆ ವೀರಶೈವರೂ ತಮ್ಮ ಸಮ್ಮತಿಯನ್ನೀಯುವದು ಕ್ರಮಪ್ರಾಪ್ತವಾಗಿದೆ. ಹೀಗೆ ಅನೇಕ ಉಪಯುಕ್ತ ಯೋಜನೆಗಳು ಈ ಮಸೂದೆಗಳಲ್ಲಿವೆ.

## ಮಠಸ್ತರ ಕಾಯದೆ.

ಮಠಸ್ತರ ಕಾಯದೆಯ ವಿಷಯವಾಗಿ ಸೂಚನೆ ಮಾಡಲಿಕ್ಕೆ ವೀರಶೈವ ಮಹಾಸಭೆಯಲ್ಲಿ ವಿ॥ ಶ್ರೀ. ಬಿ. ಹಾಲಭಾವಿ ನಿವೃತ್ತ ಸಬ್‌ಜಜ್ಜ ಇವರ ಅಧ್ಯಕ್ಷತೆಯಲ್ಲಿ ಒಂದು ಮಂಡಳವು ಸ್ಥಾಪಿಸಲ್ಪಟ್ಟಿತು. ಈ ಮಂಡಳದವರು “ ಲಿಂಗಾಯತ ಮಠಗಳ ಆಸ್ತಿಗೆ ಉತ್ತರಾಧಿಕಾರವನ್ನು ನಿಯಮನ ಮಾಡುವ ಕಾನೂನು ” ಎಂಬ ಹೆಸರಿನಿಂದ ಒಂದು ಪತ್ರಿಕೆಯನ್ನು ಪ್ರಕಟಿಸಿದ್ದಾರೆ.

ಮಠಗಳ ಕಾಯದೆಯನ್ನು ನಿರ್ಧರಿಸಲು ವೀರಶೈವ ವಾಙ್ಮಯದಲ್ಲಿ ಅಧಿಕೃತ ಗ್ರಂಥವು ಈ ವರೆಗೂ ಉಪಲಬ್ಧವಾಗಿಲ್ಲ. ಆದ್ದರಿಂದ ಸ್ಥಾನಿಕ ರೂಢಿಗೆ ಅನುಸರಿಸಿ ಮಠಗಳ ವ್ಯಾಜ್ಯಗಳನ್ನು ಕೋರ್ಟಿನವರು ತೀರ್ಮಾನಿಸಬೇಕಾಗುತ್ತದೆ. ಮಠಗಳು ವೈಯ್ಯಕ್ತಿಕ ಸಂಸ್ಥೆಗಳಿರದೆ ಸಾಮಾಜಿಕ ಸಂಸ್ಥೆಗಳಾಗಿರುವದರಿಂದ ಇವುಗಳ ವ್ಯಾಜ್ಯಗಳು ಗ್ರಾಮಗಳಲ್ಲಿ ಉಗ್ರವಾದ ಪಕ್ಷಗಳನ್ನು ಉಂಟು ಮಾಡುತ್ತಿವೆ. ಇದರಿಂದ ಜನರಲ್ಲಿ ದ್ವೇಷಗಳು ಉಂಟಾಗಿ ಮಠಗಳ ಉದ್ದೇಶಗಳು ಭಂಗ ಹೊಂದುತ್ತಲಿದೆ. ಇದರಿಂದ ಮಠಗಳಿಗಿರತಕ್ಕ ಕಾಯದೆಗಳು ನಿಶ್ಚಿತ ಸ್ವರೂಪದಿಂದ ಅನ್ವಯಿಸಲ್ಪಟ್ಟಿದ್ದಾದರೆ ಇಂಥ ವ್ಯಾಜ್ಯಗಳು ಕಡಿಮೆಯಾಗುವದರಲ್ಲಿ ಏನೂ ಸಂದೇಹವಿರಲಾರದು.

ಮಹಾ ಸಭೆಯಿಂದ ನಿಯಮಿಸಲ್ಪಟ್ಟ ಮಂಡಳದವರು ಈಗ ಸಿದ್ಧಪಡಿಸಿ ಪ್ರಸಿದ್ಧಿಸಿದ ಕಾನೂನು ಇನ್ನೂ ಬಹಳ ಅನಿಶ್ಚಯಾತ್ಮಕ ಸ್ವರೂಪದಲ್ಲಿದ್ದು ಅದು ವ್ಯಾಜ್ಯಗಳನ್ನು ದೂರಮಾಡಲಾರದೆಂದು ನಮಗೆ ತೋರುತ್ತದೆ. ಈ ಬಗ್ಗೆ ಕೆಲವು ಉದಾಹರಣೆಗಳನ್ನು ನಾವು ಕೆಳಗೆ ಕೊಡುತ್ತೇವೆ.

ವಿರಕ್ತ ಮಠಗಳಿಗೆ ಅಥವಾ ಶಿಷ್ಯವರ್ಗ ಮತ್ತು ಪುತ್ರವರ್ಗ ಮಠಗಳಿಗೆ ಉತ್ತರಾಧಿಕಾರಿಯನ್ನು ನೇಮಿಸುವಲ್ಲಿ ಆ ಮಠಗಳ ಶಿಷ್ಯರು ಸರ್ವಾನುಮತದಿಂದಾಗಲಿ ಬಹುಮತದಿಂದಾಗಲಿ ನೇಮಿಸಲು ಹಕ್ಕುದಾರರಿದ್ದಾರೆಂದು ಒಂದು ಸೂಚನೆಯು ಇದರಲ್ಲಿ ಇದೆ. ಒಂದು ಗ್ರಾಮದಲ್ಲಿ ಅನೇಕ ಮಠಗಳಿರುತ್ತವೆ. ಗ್ರಾಮಗಳಲ್ಲಿಯವರು ತಮ್ಮ ತಮ್ಮ ಮಠಗಳನ್ನು ಗೊತ್ತುಪಡಿಸಿಕೊಂಡು ಅವುಗಳಿಗೆಯೇ ನಡೆಯುವದುಂಟು. ಉಳಿದ ಮಠಗಳಿಗೋಸ್ಕರ ಅವರು ವಿರೋಧವನ್ನಾಗಲಿ ಅಥವಾ ಉದಾಸೀನತೆಯನ್ನಾಗಲಿ ತಾಳಿರುತ್ತಾರೆ. ಆದ್ದರಿಂದ ವಿರೋಧ ಭಾವವುಳ್ಳ ಮತದಾರರ ಮತವನ್ನು ಸ್ವೀಕರಿಸಲು ಆ ಮಠದ ಅನುಯಾಯಿಗಳು ಒಪ್ಪಲಿಕ್ಕಿಲ್ಲ. ಈ ಸ್ಥಿತಿಯು ಬಹುತರ ಎಲ್ಲ ಗ್ರಾಮಗಳಲ್ಲಿಯೂ ಇರುತ್ತದೆ. ಮೈಸೂರು ಪ್ರಾಂತದಲ್ಲಿ ಅನೇಕ ಉಪಪಂಗಡಗಳಿದ್ದು ಅವುಗಳಿಗೊಂದೊಂದು ಮಠಗಳಾಗಿವೆ. ಉತ್ತರ ಕರ್ನಾಟಕದಲ್ಲಿಯೂ ಕೆಲವು ಕಡೆಗೆ ಹೀಗೆಯೇ ಇದೆ. ಆದ್ದರಿಂದ ಮಠದ ಶಿಷ್ಯರಾರು, ಅವರಲ್ಲಿ ಮತಕೊಡತಕ್ಕವರಾರು, ಚುನಾವಣಿಯು ಯಾವ ಪದ್ಧತಿಯನ್ನು ಅನುಸರಿಸಬೇಕು, ಎಂಬ ವಿಷಯಗಳನ್ನು ಗೊತ್ತುಪಡಿಸದೆ ಇದ್ದರೆ ಉತ್ತರಾಧಿಕಾರಿ ನೇಮಿಸುವ ಬಗ್ಗೆ ವ್ಯಾಜ್ಯಗಳು ಹೋಗಲಾರವೆಂದು ನಮಗೆ ತೋರುತ್ತದೆ.

ಮಠಾಧಿಕಾರಿಯಾದ ಬಳಿಕ ಮಠದ ಆಸ್ತಿಯ ಮೇಲೆ ಅವನ ಹಕ್ಕು ಎಷ್ಟರ ಮಟ್ಟಿಗೆ ಇರತಕ್ಕದ್ದು, ಅದರ ಮೇಲೆ ಅವನ ಪೂರ್ಣ ಸ್ವಾಮಿತ್ವವಿರತಕ್ಕದ್ದೋ ಹೇಗೆ, ಇದ್ದಿದ್ದಾದರೆ ಅದರ ಎಂಥ ಆಸ್ತಿಯ ಮೇಲೆ, ಒಂದುವೇಳೆ ಈ ಸ್ವಾಮಿತ್ವವು ನಿಯಂತ್ರಿತವಾಗಿದ್ದರೆ ನಿಯಂತ್ರಣಕ್ಕೋಸ್ಕರ ಯಾವ ಅಧಿಕಾರಿಯು ಇರತಕ್ಕದ್ದು, ಮಠದ ಆದಾಯವನ್ನು ಹೇಗೆ ವಿನಿಯೋಗಿಸಬೇಕು, ಇವೇ ಮೊದಲಾದ ವಿಷಯಗಳನ್ನು ನಿರ್ಧರಿಸಬೇಕಾಗುತ್ತದೆ. ಇವುಗಳು ಇದರಲ್ಲಿ ನಿರ್ಧರಿಸಲ್ಪಟ್ಟಿಲ್ಲ. ಇದರಿಂದ ಮಠದ ಉದ್ದೇಶಗಳು ಪೂರ್ಣವಾಗಲಾರವು.

ಮಠಾಧಿಕಾರಿಯು ಅಯೋಗ್ಯ ವರ್ತನೆಯುಳ್ಳವನಾಗಿದ್ದರೆ ಅವನನ್ನು ತಳ್ಳಿಹಾಕುವ ಅಧಿಕಾರವಿದೆಯೋ ಹ್ಯಾಗೆ ಎಂಬುದರ ಉಲ್ಲೇಖವು ಈ ಸೂಚಿತ ಕಾನೂನಿನಲ್ಲಿಲ್ಲ. ಮಠಾಧಿಕಾರಿಯು ಕೆಲವೊಂದು ಯೋಗ್ಯತೆಯುಳ್ಳವನಿರಬೇಕಾಗಿದ್ದರೆ ಆ ಯೋಗ್ಯತೆಯನ್ನು ಅವನು

ಮುಂದೆ ಕಳಕೊಂಡರೆ ಆದರೊಡನೆ ಅವನ ಅಧಿಕಾರವೂ ಹೋಗತಕ್ಕದ್ದು ನ್ಯಾಯಸಮ್ಮತವು. ಈ ವಿಷಯವಾಗಿಯೂ ಯೋಗ್ಯ ನಿರ್ಧಾರಗಳು ಇದರಲ್ಲಿಲ್ಲ.

"ಪುತ್ರವರ್ಗಮಠದ ಪಟ್ಟಾಧಿಕಾರವನ್ನು ಆ ಕುಟುಂಬದ ಇತರ ಜನರು ಮಠದ ಪದ್ಧತಿಯ ಪ್ರಕಾರ ಶಿಷ್ಯರ ಸಮ್ಮತಿಯಿಂದಾಗಲಿ ಅವರ ಸಮ್ಮತಿ ಇಲ್ಲದೆಯಾಗಲಿ ನೇಮಿಸಿ ಅಧಿಕಾರ ಕೊಡಬಹುದು." ಎಂದು ಈ ಸೂಚನಾಪತ್ರಿಕೆಯಲ್ಲಿ ಹೇಳಿದೆ. ಇದು ಅತ್ಯಂತ ಅನಿಶ್ಚಯಾತ್ಮಕ ಭಾಷೆಯಲ್ಲಿದೆ. "ಕುಟುಂಬದ ಇತರ ಜನರು" ಎಂದರೆ ಯಾರು, ಅವರು ಎಷ್ಟು ತಲೆಯ ವರೆಗಿನವರು ಇರಬೇಕು, ಎಂಬುದರ ನಿರ್ದೇಶಗಳಿಲ್ಲ. ಅಥವಾ ಅವರು ಸಂಯುಕ್ತ ಕುಟುಂಬದವರಷ್ಟೇ ಇರಬೇಕೋ ಹೇಗೆ ಇದೂ ತಿಳಿಯುವದಿಲ್ಲ. ಒಂದು ವೇಳೆ ಅಣ್ಣ ತಮ್ಮಂದಿರಲ್ಲಿಯೇ ವ್ಯಾಜ್ಯಗಳುಂಟಾದಲ್ಲಿ ಈ ಬಗೆಯ ನಿಯಮವು ಕೋರ್ಟುಗಳಿಗೆ ಸಹಾಯಕಾರಿಯಾಗಲಾರದು. ಮುಂದೆ--"ಮಠದ ಪದ್ಧತಿಯ ಪ್ರಕಾರ" ಮತ್ತು "ಶಿಷ್ಯರ ಸಮ್ಮತಿಯಿಂದಾಗಲಿ, ಅವರ ಸಮ್ಮತಿ ಇಲ್ಲದೆಯಾಗಲಿ, ನಿಯಮಿಸಿ" ಎಂಬ ಶಬ್ದಗಳು ಇಲ್ಲಿ ಇವೆ. ಇಲ್ಲಿ ಮಠದ ಪದ್ಧತಿಯನ್ನು ನಿಶ್ಚಯಪಡಿಸದೆ ಹೋದರೆ ಇಂಥ ಕಾನೂನಿನಿಂದ ಏನು ಪ್ರಯೋಜನ?

ಮಠದ ಕಾರ್ಯಗಳು "ಲಿಂಗಾಯತನ ಜನ್ಮ, ಲಗ್ನ, ಮರಣ ಮುಂತಾದ ವಿಧಿಗಳನ್ನು ಮಾಡುವದು ಮತ್ತು ಲಿಂಗದೀಕ್ಷೆ ಮಾಡುವದು ಇವು ಪಟ್ಟಾಧಿಕಾರಿಯು ಲಿಂಗಾಯತ ಸಮಾಜದ ಸಂಬಂಧವಾಗಿ ಮಾಡತಕ್ಕ ಕರ್ತವ್ಯಗಳು" ಎಂದು ೧೪ನೇ ನಿಯಮದಲ್ಲಿದೆ. ಈ ಕರ್ತವ್ಯಗಳು ಪೂರ್ಣವಾಗಿಲ್ಲೆಂದು ನಮಗೆ ತೋರುತ್ತದೆ. ಇವು ಇನ್ನೂ ಹೆಚ್ಚಿಗೆ ವ್ಯಾಪಕವಾಗಿರುವದು ಅವಶ್ಯವಾಗಿರುತ್ತದೆ.

ಮಠದ ಪಟ್ಟಾಧಿಕಾರಿಯು ತನ್ನ ಜೀವಮಾನದಲ್ಲಿ ತನ್ನ ಉತ್ತರಾಧಿಕಾರಿಯನ್ನು ನೇಮಿಸುವ ಸ್ವತಂತ್ರ ಹಕ್ಕು ಅವನಿಗೆ ಇರುತ್ತದೆಂಬ ಅಭಿಪ್ರಾಯವು ಈ ಪತ್ರಿಕೆಯಲ್ಲಿದೆ. ಮಠಗಳು ಸಾರ್ವಜನಿಕ ಸ್ವರೂಪವುಳ್ಳವುಗಳಿದ್ದರೆ, ಮಠದ ಪಟ್ಟಾಧಿಕಾರಿಗೆ ಇಂಥ ಅಧಿಕಾರವು ಅನಿರ್ಬಂಧವಾಗಿರುವದು ಸರಿಯಾಗಲಾರದು.

ಇವೆಲ್ಲ ವಿಷಯಗಳು 'ವಾದಗ್ರಸ್ತವಾಗಿವೆ. ಇವುಗಳು ನಿರ್ಧಾರ ವಾಗದೆ ಹೋದಲ್ಲಿ ಮಠದ ವ್ಯಾಜ್ಯಗಳು ನಿಲ್ಲಲಾರವು. ಈಗಿನ ಪರಿ ಸ್ಥಿತಿಯಲ್ಲಿ ಕೇವಲ ವಿರಕ್ತಮಠಗಳು ಮತ್ತು ಶಿಷ್ಯವರ್ಗ ಗುರುಸ್ಥಲ ಮಠಗಳು ಇವುಗಳಿಗೆ ಮಾತ್ರ ಅನ್ವಯಿಸುವಂಥ ಕಾಯಿದೆಯನ್ನು ಮಾಡಿಕೊಳ್ಳುವದು ಹೆಚ್ಚಿಗೆ ವ್ಯವಹಾರ್ಯವಾದೀತೆಂದು ನಮಗೆ ತೋರು ತ್ತದೆ. ಅವುಗಳಷ್ಟೇ ಸಮಾಜದ ಮಠಗಳೆಂದು ಭಾವಿಸಿ ಮದ್ರಾಸ ಇಲಾ ಖೆಯಲ್ಲಿ ಹೇಗೆ ಧಾರ್ಮಿಕ ಸಂಸ್ಥೆಗಳು ನಿಯಂತ್ರಣಗೊಳಿಸಲ್ಪಟ್ಟಿವೆಯೋ ಹಾಗೆಯೇ ಇವುಗಳನ್ನು ಮೊದಲು ನಿಯಂತ್ರಣಗೊಳಿಸಬೇಕು.

ಒಟ್ಟಿಗೆ ಮಠಗಳ ಬಗ್ಗೆ ಕಾಯಿದೆ ಇರುವದು ಅವಶ್ಯವು. ಅದು ಅನಿಶ್ಚಯಾತ್ಮಕವಿರುವದರಿಂದ ಸಮಾಜದ ಹಣವು ವ್ಯಾಜ್ಯಗಳ ಮೂಲಕ ಬಹಳ ಹಾಳಾಗುತ್ತಿದೆ. ಈ ಸ್ಥಿತಿಯನ್ನು ನಾವು ಅವಶ್ಯವಾಗಿ ದೂರ ಮಾಡಿಕೊಳ್ಳಬೇಕು. ಆದರೆ ಯಾವ ವಿಷಯಗಳ ಬಗ್ಗೆ ಅವು ಇರ ತಕ್ಕದ್ದೆಂಬುದನ್ನು ಗೊತ್ತುಪಡಿಸಬೇಕು.

ಮೊದಲು ಬೇರೆ ಬೇರೆ ಪ್ರಾಂತಗಳಲ್ಲಿರುವ ರೂಢಿಗಳನ್ನು ನಾವು ಸ್ಥಾನಿಕ ನಿರೀಕ್ಷಣೆ ಮಾಡಿ ಗೊತ್ತುಪಡಿಸಿಕೊಂಡು ಅವುಗಳ ಮತ್ತು ಈಗ ಉಪಲಬ್ಧವಿರುವ ಗ್ರಂಥಗಳ ಸಹಾಯದಿಂದ ವೀರಶೈವ ಮಠಗಳ ಪದ್ಧ ತಿಗಳ ಬಗ್ಗೆ ಒಂದು ಅಧಿಕೃತ ಗ್ರಂಥವನ್ನು ಸಿದ್ಧಪಡಿಸುವದು ಅವಶ್ಯ ವೆಂದು ತೋರುತ್ತದೆ. ಹೀಗೆ ಸಿದ್ಧಪಡಿಸಿ ಅದರೊಳಗೆ ಹೇಳಿದ ವಿಷಯಗಳು ಯೋಗ್ಯವೂ ಸತ್ಯವೂ ಎಂದು ಸಾರ್ವಜನಿಕವಾಗಿ ಕಂಡುಬಂದಲ್ಲಿ ಅವು ಗಳಿಗನುಸಾರವಾಗಿ 'ವೀರಶೈವರ ಕಾಯಿದೆ'ಯನ್ನು ನಿರ್ಮಿಸಿಕೊಳ್ಳುವದು ಹೆಚ್ಚಿಗೆ ಸುಲಭವಾಗುವದು. ಆದ್ದರಿಂದ ಮಹಾಸಭೆಯ ಕಾರ್ಯ ಕರ್ತೃಗಳು ಈ ರೀತಿ ಪ್ರಯತ್ನಿಸುವದು ಹೆಚ್ಚಿಗೆ ಪ್ರಯೋಜನವಾದದ್ದು ಎಂದು ನಮಗೆ ತೋರುತ್ತದೆ.

ಅವರು ಒಂದು ಆಕಳನ್ನು ಕದ್ದು ಅದನ್ನು ಕೊಂದರು. ಆಗ ಪಟ್ಟಣದಲ್ಲಿಯ ಜನರು ಸಿಟ್ಟಿಗೆದ್ದು ಅವರ ಅಂಗಡಿಯನ್ನು ಮುತ್ತಿದರು. ಅಲ್ಲಿದ್ದ ಮೆಣಸನ್ನು ಹಾಳುಮಾಡಿದರು. ಆದರೆ ಇಂಗ್ಲಿಷರು ಜನರಿಗೆ ತಾವು ಹಾನಿ ತುಂಬಿಕೊಡುವೆವೆಂದು ಹೇಳಿದ ಬಳಿಕ ಜಗಳವು ನಿಂತಿತು. ಇದರಿಂದ ಆಗಿನ ಕಾಲದ ಜನರಲ್ಲಿ ಎಷ್ಟು ಸ್ವಾಭಿಮಾನವು ವಾಸಮಾಡುತ್ತಿತ್ತೆಂಬುದೂ ಇಂಗ್ಲಿಷರು ಎಷ್ಟು ದುರ್ಬಲಸ್ಥಿತಿಯಲ್ಲಿದ್ದರೆಂಬುದೂ ತಿಳಿಯುತ್ತಿದೆ.

ಸದಾಶಿವರಾಜನು ತನ್ನ ರಾಜ್ಯದಲ್ಲಿ ಘಟ್ಟದ ಮೇಲಿನ ಸೀಮೆಗೆ ಬಾಲಾಘಾಟವೆಂತಲೂ ಸಮುದ್ರ ತೀರದ ಪ್ರದೇಶಕ್ಕೆ ಪಯಣಘಾಟವೆಂತಲೂ ವಿಂಗಡಿಸಿ ರಾಜ್ಯ ವ್ಯವಸ್ಥೆಯನ್ನು ಮಾಡಿ ಅಲ್ಲಲ್ಲಿಯ ಪರಿಸ್ಥಿತಿಗನುಸರಿಸಿ ಕಂದಾಯವನ್ನೆತ್ತುತ್ತ ರಾಜ್ಯವಾಳುತ್ತಿದ್ದನು. ಈಪ್ರಕಾರ ಸದಾಶಿವರಾಜನು ಬಹು ವೈಭವದಿಂದಲೂ ಜಾಣತನದಿಂದಲೂ ರಾಜ್ಯವಾಳಿದನು.

**ಬಸವಲಿಂಗರಾಜ**:— ಸದಾಶಿವರಾಜನ ತರುವಾಯ ಅವನ ಮಗನಾದ ಬಸವರಾಜನು ಪಟ್ಟವೇರಿದನು. ಅವನು ೧೬೯೭ ರಿಂದ ೧೭೪೫ ರ ವರೆಗೆ ಅಂದರೆ ೪೮ ವರ್ಷಗಳ ವರೆಗೆ ರಾಜ್ಯಭಾರಮಾಡಿದನು. ಇವನು ತನ್ನ ತಂದೆ ಸದಾಶಿವರಾಯನಕಿಂತಲೂ ಹೆಚ್ಚಾದ ಘನತೆಯಿಂದಲೂ ವೈಭವದಿಂದಲೂ ರಾಜ್ಯವಾಳಿದನು. ಅವನು ತನ್ನ ರಾಜ್ಯದ ಮೇರೆಯನ್ನು ಹೆಚ್ಚಿಸಿ, ಅದನ್ನು ದಕ್ಷಿಣಕ್ಕೆ ಮಿರ್ಜಾನ ಬಂದರದ ವರೆಗೆ ಬೆಳೆಸಿದನು. ಅವನ ರಾಜ್ಯದಲ್ಲಿ ಕಾರವಾರ ಅಂಕೋಲಾ, ಕದರಮುಡಿ ಮತ್ತು, ಮಿರ್ಜಾನ ಎಂಬ ಮುಖ್ಯ ಬಂದರಗಳುಂಟಾಗಿ ಅವುಗಳ ಮೂಲಕ ಪರದೇಶಗಳ ಕೂಡ ಬಹು ದೊಡ್ಡ ವ್ಯಾಪಾರವು ನಡೆಯುತ್ತಿತ್ತು ಅವನ ರಾಜ್ಯದಲ್ಲಿ ಇಂಗ್ಲಿಷರೂ ಪೋರ್ತುಗೀಜರೂ ಅಂಗಡಿಗಳನ್ನು ಹಾಕಿಕೊಂಡು ವ್ಯಾಪಾರ ಮಾಡುವರು. ಇಂಗ್ಲಿಷರು ಕಾರವಾರದಲ್ಲಿಯೂ ಹಲ್ಯಾಳದಲ್ಲಿಯೂ ತಮ್ಮ ಅಂಗಡಿಗಳನ್ನು ಹಾಕಿದ್ದರು. ಆದರೆ ಅವರಿಗೂ ಬಸವಲಿಂಗರಾಜನಿಗೂ ವಿರೋಧಗಳು ಉಂಟಾಗಿ ಆಗಿಂದಾಗ್ಗೆ ಕದನಗಳೇಳುತ್ತಿದ್ದವು. ಈ ಪರಕೀಯರು ಕೇವಲ ವ್ಯಾಪಾರಿಗಳಾಗಿರದೆ ದಂಡಾಳುಗಳನ್ನು ತೆಗೆದುಕೊಂಡು ದೇಶದ ಅಂತಸ್ಥ ಕಲಹಗಳಲ್ಲಿ ಸೇರಿ

ಕೊಳ್ಳಲು ಯಾವಾಗಲೂ ಯತ್ನಿಸುತ್ತಿದ್ದರು. ಆದರೆ ಸ್ವಾದಿ ಮತ್ತು ಕೆಳದಿಯ ರಾಜರು ಅವರ ವರ್ಚಸ್ಸನ್ನು ತಮ್ಮ ರಾಜ್ಯದಲ್ಲಿ ಬೆಳೆಯದಂತೆ ಜಾಣತನದಿಂದ ವರ್ತಿಸುತ್ತ ಬಂದರು. ೧೭೧೫ ರಲ್ಲಿ ಬಸವಲಿಂಗ ರಾಜನಿಗೆ ಕಾರವಾರದಲ್ಲಿಯ ಇಂಗ್ಲಿಷರ ಫ್ಯಾಕ್ಟರಿಯನ್ನು ಮುತ್ತುವ ಪ್ರಸಂಗವು ಬಂದೊದಗಿತು. ಅವನು ೨ ತಿಂಗಳ ವರೆಗೆ ಅದನ್ನು ಮುತ್ತಿದನು. ಇಂಗ್ಲಿಷ ನೌಕಾಪಡೆಯು ಈ ಮುತ್ತಿಗೆಯನ್ನೆಬ್ಬಿಸಲು ಎಷ್ಟು ಪ್ರಯತ್ನಬಟ್ಟರೂ ಅದು ಸಾಧ್ಯವಾಗಲಿಲ್ಲ. ಆದರೆ ಕಡೆಗೆ ಒಬ್ಬ ದೊಡ್ಡ ವ್ಯಾಪಾರಸ್ಥನ ಮಧ್ಯಸ್ತಿಕೆಯಿಂದ ಉಭಯತರಲ್ಲಿ ಒಡಂಬಡಿಕೆಯಾಯಿತು.

ಮುಂದೆ ಬಸವಲಿಂಗರಾಜನು ಕಾರವಾರದ ಉತ್ತರಕ್ಕೆ ಕಾಳೀ ನದಿಯ ಮುಖದಲ್ಲಿ ಮೊದಲಿದ್ದ ಕೋಟೆಯನ್ನು ಕೆಡವಿ ಅಲ್ಲಿ ತನ್ನ ತಂದೆಯ ಹೆಸರಿನಿಂದ 'ಸದಾಶಿವಗಡ' ಎಂಬ ಬಲವಾದ ಕೋಟೆಯನ್ನು ಕಟ್ಟಿಸಿದನು. ಮುಂದೆ ಅವನಿಗೂ ಇಂಗ್ಲಿಷರಿಗೂ ಕೂಡಿ ಬಾರದ್ದರಿಂದ ಇಂಗ್ಲಿಷರು ಅವನ ರಾಜ್ಯದಲ್ಲಿಯ ಅಂಗಡಿಗಳನ್ನು ಕಿತ್ತುಕೊಂಡು ಮದ್ರಾಸದ ಕಡೆಗೆ ಹೋಗಿ ಅಲ್ಲಿ ನಿಂತುಕೊಂಡರು. ಅಲ್ಲಿ ಅವರೂ ಫ್ರೆಂಚರೂ ವ್ಯಾಪಾರ ನಡಿಸಿದರು. ಮುಂದೆ ಈ ಉಭಯತರು ಅರ್ಕಾಟ ನವಾಬನ ರಾಜ್ಯಕಾರಭಾರದಲ್ಲಿ ಕೈಹಾಕಿ ಒಬ್ಬರನ್ನೊಬ್ಬರು ಸ್ಪರ್ಧಿಸುತ್ತ ರಾಜ್ಯವನ್ನು ಸೆಳೆದುಕೊಳ್ಳುವ ಕಾರ್ಯಗಳನ್ನು ಆರಂಭಿಸಿದ್ದು ಇತಿಹಾಸ ಪ್ರಸಿದ್ಧವಿದೆ. ಆದರೆ ಅವರ ಈ ಆಟವನ್ನು ಸ್ವಾದಿಯ ಮತ್ತು ಕೆಳದಿಯ ರಾಜರು ತಮ್ಮ ರಾಜ್ಯಗಳಲ್ಲಿ ನಡಿಯಗೊಡಲಿಲ್ಲ.

ಬಸವಲಿಂಗರಾಜನ ಕೂಡ ಪೋರ್ತುಗೀಜರು ಸಹಕಾರದಿಂದ ವರ್ತಿಸಿದರು. ೧೬೯೭ ಮತ್ತು ೧೭೩೯ ರಲ್ಲಿ ಅವರು ಬಸವಲಿಂಗರಾಜನ ಕೂಡ ಒಂದು ಒಡಂಬಡಿಕೆ ಮಾಡಿಕೊಂಡು ಸ್ನೇಹದಿಂದ ವರ್ತಿಸುತ್ತ ಬಂದರು. ಇದರಿಂದ ಅವರು ತಮ್ಮ ವ್ಯಾಪಾರವನ್ನು ಕರ್ನಾಟಕದ ಕೂಡ ಯಾವ ತೊಂದರೆಗಳಿಲ್ಲದೆ ನಡಿಸುತ್ತ ಬಂದರು.

ಈ ಕಾಲದಲ್ಲಿ ಪೇಶ್ವೆಯರು ಪ್ರಬಲರಾಗಿ ಕರ್ನಾಟಕದಲ್ಲಿ ದಾಳೀ ಮಾಡಿ ಚೌಥ ಎತ್ತುವ ಪ್ರಯತ್ನದಲ್ಲಿ ತೊಡಗಿದ್ದರು. ೧೭೨೭ ರಲ್ಲಿ ಪೇಶ್ವೆ ಬಾಳಾಜಿ ಬಾಜೀರಾಯನು ಕರ್ನಾಟಕದಲ್ಲಿ ದಾಳೀ ಮಾಡಿದನು.

ಅವನು ಸ್ವಾದೀ ರಾಜಧಾನಿಯ ಮೇಲೇರಿ ಹೋಗಿ ಅದನ್ನು ಸುಲಿದನು. ಆಗ ಬಸವಲಿಂಗರಾಜನು ಅವನಿಗೆ ಚೌಥವನ್ನು ಕೊಡಬೇಕಾಯಿತು. ಆದರೆ ಪೇಶ್ವೆಯರ ಪ್ರಾಬಲ್ಯವು ಮುಂದೆ ಕಡಿಮೆಯಾಗಲು ಅವನು ಇದನ್ನು ಕೊಡುವದನ್ನು ನಿಲ್ಲಿಸಿಬಿಟ್ಟನು. ೧೭೩೯ ರಲ್ಲಿ ಪೋರ್ತುಗೀಜರಿಗೂ ಮರಾಠರಿಗೂ ಕದನಗಳಿದ್ದವು. ಅವುಗಳಲ್ಲಿ ಬಸವಲಿಂಗರಾಜನು ಪೋರ್ತುಗೀಜರ ಪಕ್ಷವನ್ನು ವಹಿಸಿ ಅವರಿಗೆ ಸಹಾಯ ಮಾಡಿದನು.

ಸ್ವಾದಿಯ ರಾಜ್ಯವು ಅತ್ಯಂತ ನಿಬಿಡವಾದ ಅರಣ್ಯ ಪ್ರದೇಶದಲ್ಲಿದ್ದದರಿಂದ ಅದು ಎಷ್ಟು ಶ್ರೀಮಂತವಿದ್ದರೂ ವಿರೋಧಿಗಳು ಅದರ ಮೇಲೇರಿ ಬಂದು ಅದನ್ನು ಕೈವಶಮಾಡಿಕೊಳ್ಳಲು ಸಾಹಸ ಮಾಡುತ್ತಿದ್ದಿಲ್ಲ. ಈ ಪ್ರಕಾರ ಬಸವಲಿಂಗರಾಜನು ತನ್ನ ರಾಜ್ಯದಲ್ಲಿ ಪರಕೀಯರ ಪ್ರವೇಶಕ್ಕೆ ಇಂಬುಗೊಡದೆ ಅದನ್ನು ಉತ್ತಮ ರೀತಿಯಿಂದ ೪೮ ವರ್ಷಗಳವರೆಗೆ ಪರಿಪಾಲನೆ ಮಾಡಿದನು.

**ಇಮ್ಮಡಿ ಸದಾಶಿವರಾಜಃ—** ಬಸವಲಿಂಗರಾಜನ ತರುವಾಯ ಅವನ ಮಗನಾದ ಇಮ್ಮಡಿ ಸದಾಶಿವರಾಜನು ಪಟ್ಟವೇರಿದನು. ಅವನು ೧೭೪೫ ರಿಂದ ೧೭೬೩ ರ ವರೆಗೆ ರಾಜ್ಯವಾಳಿದನು. ಇವನು ಬಹಳ ದುರ್ಬಲನಾಗಿದ್ದನು. ಮತ್ತು ತನ್ನ ವೇಳೆಯನ್ನು ಸ್ವೈರವೃತ್ತಿಯಲ್ಲಿಯೇ ಕಳೆಯುತ್ತಿದ್ದನು. ೧೭೫೦ ರಲ್ಲಿ ಅವನ ರಾಜ್ಯವನ್ನು ಮರಾಠರು ಅಭಿಯೋಗಿಸಿದರು. ಅವರಿಗೆ ಅವನು ಒಂದು ಲಕ್ಷ ರೂಪಾಯಿಗಳ ಕಪ್ಪವನ್ನು ಕೊಡಬೇಕಾಯಿತು. ಆದರಿಂದ ಜನರ ಮೇಲೆ ಬಹು ಹೆಚ್ಚಾದ ಕರಭಾರವನ್ನು ಅವನು ಹಾಕಬೇಕಾಯಿತು.

ಅವನ ಕಾಲದಲ್ಲಿ ಪೋರ್ತುಗೀಜರು ಬಹಳ ಪ್ರಾಬಲ್ಯವನ್ನು ಹೊಂದಿದರು. ಅವನಿಗೆ ಹಣದ ಕೊರತೆಯಾದದ್ದರಿಂದ ಮೊದಲು ಇಂಗ್ಲಿಷರಿಗೆ ಹಣಕೊಡಲು ಕೇಳಿಕೊಂಡನು. ಅವರು ತಮಗೆ ರಾಜ್ಯದಲ್ಲಿ ವ್ಯಾಪಾರ ನಡಿಸಲು ಅನುಕೂಲ ಮಾಡಿಕೊಟ್ಟರೆ ಮಾತ್ರ ಹಣ ಕೊಡುವೆವೆಂದು ಹೇಳಿದರು. ಆದರೆ ಪೋರ್ತುಗೀಜರು ಅದಕ್ಕೆ ಅಡ್ಡ ಬಂದು ಅರಸನೊಡನೆ ತಾವೇ ಒಪ್ಪಂದ ಮಾಡಿಕೊಂಡು, ಅದರ ಪ್ರಕಾರ ಅವನ ರಾಜ್ಯದಲ್ಲಿ ೪ ಹಳ್ಳಿಗಳನ್ನು ಪಡೆದರು. ಮತ್ತು

೧೭೫೨ ರಲ್ಲಿ ಪೀರ ಎಂಬಲ್ಲಿಯೂ ೧೭೫೪ ರಲ್ಲಿ ಕಾರವಾರದ ದಕ್ಷಿಣಕ್ಕೆ ಬಯುತಖೋಲಿನ ಸಮೀಪದಲ್ಲಿಯೂ ಕೋಟೆಗಳನ್ನು ಕಟ್ಟಲಿಕ್ಕೆ ಒಪ್ಪಿಗೆಯನ್ನು ಪಡೆದರು. ೧೭೫೮ ರಲ್ಲಿ ಮರಾಠರು ಪುನಃ ರಾಜ್ಯವನ್ನು ಅಭಿಯೋಗಿಸಲು ರಾಜನು ಅವರಿಗೆ ಕಪ್ಪವನ್ನು ಕೊಟ್ಟು ಹಿಂದಿರುಗಿಸಬೇಕಾಯಿತು. ಮುಂದೆ ೧೭೬೩ ರಲ್ಲಿ ಹೈದರಲ್ಲಿಯು ಬಿದನೂರನ್ನು ಆಕ್ರಮಿಸಿ ಆ ರಾಜ್ಯವನ್ನು ನಷ್ಟ ಮಾಡಿದನು. ಆ ಮೇಲೆ ಅವನು ಅಲ್ಲಿಂದ ಸ್ವಾದಿಯ ರಾಜ್ಯವನ್ನು ಅಭಿಯೋಗಿಸಲು ರಾಜನು ಸಮುದ್ರ ತೀರದಲ್ಲಿರುವ ಶಿವೇಶ್ವರ ಎಂಬಲ್ಲಿಗೆ ಓಡಿಹೋದನು. ಆಗ ಹೈದರಲ್ಲಿಯ ಸೇನಾಪತಿಯಾದ ಹೈಬತಜಂಗನು ರಾಜ್ಯವನ್ನೆಲ್ಲ ಆಕ್ರಮಿಸಿದನು. ಅವನು ಸ್ವಾದಿ, ಶಿವೇಶ್ವರ, ಸದಾಶಿವಗಡ, ಅಂಕೋಲಾ ಈ ಗ್ರಾಮಗಳನ್ನು ಕೈವಶಮಾಡಿಕೊಳ್ಳಲು, ಅರಸನು ಪೋರ್ತುಗೀಜರ ಸೀಮೆಗೆ ಓಡಿ ಹೋಗಿ ಅಲ್ಲಿ ಆಶ್ರಯಪಡೆದನು. ಪೋರ್ತುಗೀಜರು ಅವನ ಉಪಜೀವನಕ್ಕೋಸ್ಕರ ಪೆನಶನ್ನವನ್ನು ಕೊಡಹತ್ತಿದರು.

**ಸವಾಯಿ ಬಸವಲಿಂಗರಾಜಃ**—ಇಮ್ಮಡಿ ಸದಾಶಿವರಾಜನ ತರುವಾಯ ಸವಾಯಿ ಬಸವಲಿಂಗರಾಜನು ಅವನ ಆಸ್ತಿಗೆ ಒಡೆಯನಾದನು. ಮುಂದೆ ಮೈಸೂರಿನ ಕೊನೆಯ ಯುದ್ಧವು ಪ್ರಾರಂಭವಾಗಿ ಅದರಲ್ಲಿ ಟೀಪುಸುಲ್ತಾನನು ಮರಣಹೊಂದಿದನು. ಈ ಕಾಲದಲ್ಲಿ ಸವಾಯಿ ಬಸವಲಿಂಗರಾಜನು ತನ್ನ ರಾಜ್ಯವನ್ನು ದೊರಕಿಸಬೇಕೆಂದು ದಂಡನ್ನು ಕೂಡಿಸಿ ಅದನ್ನು ಅಭಿಯೋಗಿಸಿದನು. ಅಷ್ಟರಲ್ಲಿ ಇಂಗ್ಲಿಷರ ಸೇನಾಪತಿಯಾದ ಕರ್ನಲ್ ವೆಲ್ಲಿಸ್ಲೆಯು ಈ ಭಾಗದಲ್ಲಿ ನುಗ್ಗಿದನು. ಈ ಪ್ರಾಂತವು ನಿರುಪಯೋಗವಾದುದೆಂದು ಇಂಗ್ಲಿಷರಿಗೆ ಭಾಸವಾಗಬೇಕೆಂದು ಸವಾಯಿ ಬಸವಲಿಂಗರಾಜನು ಈ ಭಾಗದಲ್ಲಿದ್ದ ಬೆಲೆಯುಳ್ಳ ತೋಟಗಳನ್ನು ಕಡಿಸಿಹಾಕಿ ಜನರಿಗೆ ಬಹಳ ಹಾನಿಮಾಡಿದನು. ಆದರೆ ವೆಲ್ಲಿಸ್ಲೆಯು ಇದನ್ನು ಗಣಿಸದೆ ಸಾಂಬ್ರಾಣಿ, ಹಲ್ಯಾಳ, ಸುಪೆ ಈ ಗ್ರಾಮಗಳನ್ನು ಕೈವಶಮಾಡಿಕೊಂಡು ರಾಜ್ಯವನ್ನೆಲ್ಲ ತನ್ನ ಸ್ವಾಧೀನದಲ್ಲಿ ತೆಗೆದುಕೊಂಡನು. ಅಂದಿನಿಂದ ಕಾರವಾರ ಜಿಲ್ಲೆಯು ಕಂಪನಿ ಸರಕಾರಕ್ಕೆ ಜೋಡಿಸಲ್ಪಟ್ಟಿತು.

ಸವಾಯಿ ಬಸವಲಿಂಗರಾಜನು ಪೋರ್ತುಗೀಜರ ಆಶ್ರಯವನ್ನು ಹೊಂದಿ ಅಲ್ಲಿಯೇ ಇರಹತ್ತಿದನು. ಅವನು ೧೮೩೪ ರಲ್ಲಿ ತೀರಿಕೊಂ

ಡನು. ಅವನ ತರುವಾಯ ಅವನ ಮಗನಾದ ಸದಾಶಿವರಾಜನು ಅವನ ಆಸ್ತಿಗೆ ಒಡೆಯನಾದನು. ಅವನು ಕೆಲವು ತಿಂಗಳು ಮಾತ್ರ ಜೀವಿಸಿದ್ದನು. ಅವನ ತರುವಾಯ ಅವನ ತಮ್ಮನಾದ ವೀರರಾಜೇಂದ್ರ ಒಡೆಯರು, ಅವನ ತರುವಾಯ ಅವನ ಮಗನಾದ ಸವಾಯಿ ಬಸವ ಲಿಂಗರಾಜೇಂದ್ರ ಒಡೆಯರು, ಅವನ ತರುವಾಯ ಸವಾಯಿ ವೀರ ಸದಾಶಿವರಾಜೇಂದ್ರ ಒಡೆಯರು, ಆಧಿಪತ್ಯಕ್ಕೆ ಬಂದರು. ಕಡೆಯವರು ಕೆಲವು ವರ್ಷಗಳ ಹಿಂದೆ ತೀರಿಕೊಂಡರು. ಪೋರ್ತುಗೀಜ ಸರಕಾರದವರು ರಾಜಮನೆತನಕ್ಕೆ ಸಲ್ಲುವ ಎಲ್ಲ ಬಹುಮಾನಗಳನ್ನೂ ೧೯ ತೋಫುಗಳ ಸಲಾಮುಗಳನ್ನೂ ಈವರೆಗೂ ಈ ಮನೆತನಕ್ಕೆ ಕೊಡುತ್ತ ಬಂದಿದ್ದಾರೆ ಅವರು ಈಗಿರುವ ಸ್ಥಳವು ಗೋವೇ ಪ್ರಾಂತದಲ್ಲಿರುವ ಬಾಂದೇವಾಡಿಯಾಗಿರುತ್ತದೆ.

---

# ೧೭ ನೇ ಪ್ರಕರಣ.

## ಬೀಳಗಿಯ ರಾಜರು.

ಬೀಳಗಿಯು ಈಗ ಕಾರವಾರ ಜಿಲ್ಲೆಯಲ್ಲಿದ್ದು ಇಲ್ಲಿ ಒಂದು ವೀರಶೈವ ರಾಜಮನೆತನವು ೧೫ನೇ ಶತಮಾನದಿಂದ ೧೮ ನೇ ಶತಮಾನದ ಅಂತ್ಯಭಾಗದ ವರೆಗೆ ರಾಜ್ಯವಾಳುತ್ತಿತ್ತು. ಈ ರಾಜ್ಯದ ಮುಖ್ಯ ಭಾಗವು ಉತ್ತರಕ್ಕೆ ಸ್ವಾದಿರಾಜ್ಯ ಮತ್ತು ದಕ್ಷಿಣಕ್ಕೆ ಕೆಳದಿಯ ರಾಜ್ಯ ಇವುಗಳ ಮಧ್ಯಪ್ರದೇಶದಲ್ಲಿ ಅಂದರೆ ಈಗಿನ ಸಿದ್ದಾಪುರ ತಾಲೂಕಿನಲ್ಲಿತ್ತು. ಮೊದಲು ಈ ರಾಜ್ಯದ ರಾಜಧಾನಿಯು ಐಸೂರು ಅಂದರೆ ಈಗಿನ ಚಂದ್ರಗುತ್ತಿಯು. ಆಮೇಲೆ ಕೆಲವು ಕಾಲ ಗತಿಸಿದ ಬಳಿಕ ಬೀಳಿಗೆಯು ಆಗಿದ್ದಿತು. 'ಬೀಳಗಿ ಅರಸರ ವಂಶಾವಳಿ' ಎಂಬ ಹೆಸರಿನ ಕಾವ್ಯವಿದ್ದು ಅದರ ಆಧಾರದಿಂದ ಕೆಳಗೆ ಕಾಣಿಸಿ ವಂಶಾವಳಿಯನ್ನು ನಾವು ಸಿದ್ಧಮಾಡಿದ್ದೇವೆ.

# ಬೀಳಗಿ ಅರಸರ ವಂಶಾವಳಿ.




೪ ನೇ ಘಂಟೇಂದ್ರ ಅಥವಾ
ಸಿದ್ದಪ್ಪ ಒಡೆಯರ್
ಮೌನ ಘಂಟೇಂದ್ರ+ಚೆನ್ನಮದೇವಿ
ಘಂಟಿಮ್ಮ
ಶಿವಪ್ಪನಾಯಕ+(೧) ಶಾಂತಮ್ಮ (೧) ಗೌರಮ್ಮಾಜಿ
ಇಮ್ಮಡಿ ಶಿವಪ್ಪ+ಶಾಂತಮ್ಮಾಜಿ
೧ ನೇ ಸೋಮಶೇಖರ+(೧) ವೀರಮ್ಮಾಜಿ
+(೨) ಚನ್ನಮಲ್ಲಾಂಬಿ
೨ ನೇ ಸೋಮಶೇಖರ+(೧) ನೀಲಮಾಂಬಿಕೆ (೨) ಚನ್ನಮಾಂಬೆ
ಭದ್ರಪ್ಪ
ಬಸವೇಂದ್ರ+(೧) ದೇವಮ್ಮಾಜಿ
(೨) ವೀರಮ್ಮಾಜಿ
ಶಾಂತವೀರ ರಾಜ
ಸೋಮಶೇಖರ+ಚನ್ನಮ್ಮಾಜಿ
ಬಸವಲಿಂಗರಾಜ+ಸೌಭದ್ರಮ್ಮಾಜಿ
ಸೋಮಶೇಖರರಾಜ

**ಅಂಡಣ್ಣ:—** ಬೀಳಗಿ ರಾಜರ ಮೂಲಪುರುಷನಾರೆಂಬುದು ನಮಗೆ ಇನ್ನೂ ತಿಳಿದು ಬಂದಿಲ್ಲ. ಆದರೆ ಅಂಡಣ್ಣನೆಂಬುವನು ಐಸೂರು ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದುದು ಬೀಳಗಿ ಅರಸರ ವಂಶಾವಳಿಯಿಂದ ತಿಳಿದು ಬರುತ್ತದೆ. ಈ ಐಸೂರು ಈಗಿನ ಚಂದ್ರಗುತ್ತಿಯು ಇರುತ್ತದೆ. ಇದು ಉನ್ನತವಾದ ಪರ್ವತ ಶಿಖರದಲ್ಲಿ ಬಹು ಭದ್ರವಾಗಿ ಕಟ್ಟಲ್ಪಟ್ಟಿತ್ತು.

**ನರಸಿಂಹಭೂಪ:—** ಅಂಡಣ್ಣನ ತರುವಾಯ ಕೆಲವು ತಲಾಂತರಗಳ ತರುವಾಯ ನರಸಿಂಹಭೂಪನು ಪ್ರಸಿದ್ಧಿಗೆ ಬಂದನು. ಅವನು ವಿಜಯನಗರದ ಕೃಷ್ಣರಾಯನ ಕಾಳಗಗಳಲ್ಲಿ ವಿಶೇಷ ಪರಾಕ್ರಮವನ್ನು ತೋರಿಸಿದನು. ಅದರಿಂದ ಅವನಿಗೆ 'ಎಂಟು ದಂಡಿಗೆಯ ಮಲೆತರಿರಾಯ ಮನ್ನೆಯರ ಗಂಡ' ಎಂದು ಮೊದಲಾಗಿ ಬಿರುದುಗಳು ಕೊಡಲ್ಪಟ್ಟವು. ಮತ್ತು ಕೃಷ್ಣರಾಯನು ಅವನಿಗೆ ತನ್ನ ಮಗಳಾದ ಹರಿಯಮ್ಮನನ್ನು ಕೊಟ್ಟು ಲಗ್ನಮಾಡಿದನು.

**೧ ನೇ ಘಂಟೇಂದ್ರ:—** ಇವನು ನರಸಿಂಹಭೂಪನ ಮಗನು. ಬೆಟ್ಟದ ಮೇಲಿರುವ ತನ್ನ ರಾಜಧಾನಿಯನ್ನು ಬಿಟ್ಟುಕೊಟ್ಟು ಬೀಳಗಿಯಲ್ಲಿ ಬಂದು ಇರಲಿಕ್ಕೆ ಹತ್ತಿದನು. ಅದಕ್ಕೆ ಅವನು ಕೋಟೆ ಕೊತ್ತಲುಗಳನ್ನು ಕಟ್ಟಿಸಿದನು. ಅವನು ಸುತ್ತಲಿನ ಪ್ರದೇಶಗಳನ್ನು ಆಕ್ರಮಿಸಿ ಬೇಡ ಕಣಿವೆ, ಕುಣಜೆ, ಕುಂಡಲಿ, ಮೂಗುಂದರ ಇಲ್ಲಿ ಕೋಟೆಗಳನ್ನು ಕಟ್ಟಿಸಿದನು.

**ರಂಗರಾಜ:—** ಇವನ ಕಾಲದಲ್ಲಿ ವಿಜಯನಗರದ ರಾಜ್ಯವು ಹಾಳಾಗಿ ಮುಸಲ್ಮಾನ ರಾಜರು ಸುತ್ತಲಿನ ಪ್ರದೇಶಗಳನ್ನು ಆಕ್ರಮಿಸಹತ್ತಿದ್ದರು. ಅದರಂತೆ ಇವನ ರಾಜ್ಯದ ಮೇಲೆ ಹಾವಳಿಗಳಾಗಲು ಬಿಕ್ಕಟ್ಟಿನ ಪ್ರದೇಶದ ಮೂಲಕ ಅವರ ಆಟವು ಇವನ ಮೇಲೆ ಏನೂ ಸಾಗಲಿಲ್ಲ.

**೨ನೇ ಘಂಟೇಂದ್ರ:—** ಇವನು ರಂಗರಾಜನ ಮಗನು. ಈತನ ಒಂದು ಶಿಲಾಶಾಸನವು ಉಪಲಬ್ಧವಿದ್ದು ಅದು ಕ್ರಿ. ಶ. ೧೫೯೩ ನೇ ಇಸ್ವಿಯದು ಇದೆ. ಇವನು ಬೀಳಗಿ ಅರಸರಲ್ಲಿ ಪ್ರಖ್ಯಾತನಾದನು.

# ಶಿವಶರಣರ ಚರಿತ್ರೆಗಳು.

## ಭಾಗ ೨.

---

### ಬೊಂತಾದೇವಿ.

ಬೊಂತಾದೇವಿಯು ಕಾಶ್ಮೀರದೇಶದಲ್ಲಿಯ ಮಾಂಡವ್ಯಪುರವೆಂಬ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದ ಅರಸನ ಮಗಳು. ಆಕೆಯು ಹುಟ್ಟಿದಾಗಿನ ಹೆಸರು ನಿಜದೇವಿ ಎಂಬುದಾಗಿತ್ತು. ಅವಳು ಚಿಕ್ಕಂದಿನಿಂದಲೂ ಕೇವಲ ಶಿವಭಕ್ತಿಯಿಂದ ಆಚರಿಸುವವಳಾಗಿದ್ದಳು. ಅವಳು ದೊಡ್ಡವಳಾದ ಬಳಿಕ ಅವಳಲ್ಲಿ ವೈರಾಗ್ಯ ಭಾವವು ಹೆಚ್ಚಿತು. ಆಗ ಅವಳು ತನ್ನ ತಂದೆಯ ರಾಜವೈಭವವನ್ನು ತೊರೆದಳು. ತನ್ನ ಉಡಿಗೆತೊಡಿಗೆಗಳನ್ನು ಸಹ ಬಿಟ್ಟುಕೊಟ್ಟು ದಿಗಂಬರಿಯಾದಳು! ಆಗ ತಂದೆತಾಯಿಗಳು ಅವಳಿಗೆ— ಎಲೆ ಮಗಳೇ, ಇದೆಲ್ಲಿಯ ಭ್ರಾಂತಿ ನಿನಗೆ? ಈ ಮಾರ್ಗವನ್ನು ಬಿಟ್ಟುಬಿಡು, ಎಂದು ಎಷ್ಟು ಬೋಧಿಸಿದರೂ ಅದು ಅವಳಿಗೆ ರುಚಿಸಲಿಲ್ಲ. ಅವಳು ಅವರಿಗೆ— ನನಗೆ ಶಿವನ ಭ್ರಾಂತಿಯುಂಟಾಗಿದೆ. ನನಗೆ ನಿಮ್ಮ ರಾಜವೈಭವವು ಬೇಡ. ಕಲ್ಯಾಣದಲ್ಲಿ ಬಸವಾದಿ ಪ್ರಮಥರು ಶಿವಾನುಭವ ಮಾರ್ಗವನ್ನು ಬೋಧಿಸುತ್ತಲಿದ್ದಾರೆ, ಅವರಿದ್ದೆಡೆಗೆ ಹೋಗುವೆನು, ಎಂದು ಹೇಳಿ ತನ್ನ ದೇಶವನ್ನು ತೊರೆದು ಕಲ್ಯಾಣಕ್ಕೆ ಹೊರಡಲನುವಾದಳು!

ಆಗ ತಂದೆತಾಯಿಗಳು ಎಷ್ಟು ಪರಿಯಿಂದ ಹೇಳಿದರೂ ಶಿವದೇವಿಯು ತನ್ನ ನಿಶ್ಚಯವನ್ನು ಬಿಡಲಿಲ್ಲ. ಅವಳು ಪಾದಚಾರಿಯಾಗಿ ಘೋರಾರಣ್ಯಗಳನ್ನು ಪ್ರವೇಶಿಸುತ್ತ ಮಾರ್ಗಕ್ರಮಣ ಮಾಡಹತ್ತಿದಳು. ಅವಳು ಅತ್ಯಂತ ಲಾವಣ್ಯವತಿಯು. ಮಾರ್ಗವಲ್ಲಿ ಅವಳನ್ನು ಬಹು ಜನರು ಕಂಡು ಅವಳಿಗೆ ಮೋಹಿತರಾದರು. ಅವರು ತಮ್ಮೊಡನೆ ಸುಖವಾಗಿರಲು ಅವಳಿಗೆ ಬಹಳ ಹೇಳಿಕೊಂಡರು. ಆದರೆ ವೈರಾಗ್ಯಶೀಲೆಯಾದ ನಿಜದೇವಿಯು ಅವರನ್ನು ನಿರಾಕರಿಸಿದಳು. ಒಂದು ದಿನ ಶಿವನು ಅವಳನ್ನು

ಪರೀಕ್ಷಿಸಬೇಕೆಂದು ಒಬ್ಬ ಸುಂದರ ಪುರುಷನ ವೇಷವನ್ನು ಧಾರಣಮಾಡಿ ಅವಳಿದ್ದೆಡೆಗೆ ಬಂದು— ಎಲೇ ನಿಜದೇವಿಯೇ, ನೀನು ನನ್ನ ಸತಿಯಾಗಿ ನನ್ನೊಡನೆ ಸುಖವಾಗಿ ಬಾಳು, ಎಂದು ಹೇಳಿಕೊಂಡನು. ಆದರೆ ನಿಜ ದೇವಿಯು ಅವನಾರೆಂಬುದನ್ನು ತಕ್ಷಣವೇ ತನ್ನ ಸುಜ್ಞಾನದಿಂದ ತಿಳಿದು ನಗುತ್ತ— ನೀನಾರೆಂಬುದು ನನಗೆ ತಿಳಿಯಿತು. ನೀನು ಕಾಮವೈರಿ ಎಂಬುದನ್ನು ನಾನು ಬಲ್ಲೆನು. ಆದರೆ ಆ ಕಾಮ ನನಗಿಲ್ಲ, ಹೋಗು, ಎಂದೆನ್ನಲು ಶಿವನು— ಆಹಾ ಇವಳು ನನ್ನನ್ನು ಗುರುತಿಸಿದಳು, ಎಂದು ಬಯಲಾಗಿ ಹೋದನು. ಮುಂದೆ ನಿಜದೇವಿಯು ಮಾರ್ಗ ಕ್ರಮಣ ಮಾಡುತ್ತಿರಲು, ಶಿವನು ಒಬ್ಬ ವಾಣಿಜನ ವೇಷವನ್ನು ಧರಿಸಿ ಪುನಃ ಅವಳೆಡೆಗೆ ಬಂದು— ನಿಜದೇವಿಯೇ, ನನಗೆ ಯಾರೂ ಇಲ್ಲ. ನೀನೆನಗೆ ಸತಿಯಾಗಿರು ಎಂದೆನ್ನಲು ಅವಳು— ನಿನ್ನ ಜಡೆ, ತೊಡೆ ಗಳ ಮೇಲೆ ಗಂಗೆ ಗೌರಿಯರೆಂಬ ಸ್ತ್ರೀಯರಿದ್ದಾರೆ. ಷಣ್ಮುಖ, ವೀರಭದ್ರ, ವಿನಾಯಕರೆಂಬ ಪುತ್ರರು ಇದ್ದಾರೆ. ಇಂಥ ನಿನ್ನನ್ನು ವರಿಸಿದರೆ, ಕಲ್ಯಾ ಣದ ಶರಣರು ನನ್ನನ್ನು ನೋಡಿ ನಗಲಿಕ್ಕಿಲ್ಲವೇ? ಕೈಲಾಸದ ಪ್ರಮಥರು ಮೆಚ್ಚರು, ಎಂದು ನುಡಿಯಲು ಶಿವನು ಅವಳ ವಿರಕ್ತಿಯನ್ನು ನೋಡಿ ಮೆಚ್ಚಿ ಪ್ರತ್ಯಕ್ಷನಾಗಿ— ಎಲೇ ನಿಜದೇವಿಯೇ, ನಿನ್ನ ವೈರಾಗ್ಯಕ್ಕೆ ನಾನು ಮೆಚ್ಚಿದೆನು. ನನ್ನ ಮಾತನ್ನು ನೀನು ಕೇಳು. ನೀನು ಹೀಗೆ ದಿಗಂಬರಿ ಯಾಗದೆ ನಾನು ನಿನಗೆ ಈಗ ಕೊಡುವ ಬೊಂತೆ (ಕೌದಿ) ಯನ್ನು ತೆಗೆದುಕೋ. ಇದನ್ನು ನೀನು ಹೊದ್ದುಕೊಂಡು, ಮಾರ್ಗಕ್ರಮಣ ವನ್ನು ಮಾಡು, ಎಂದು ಹೇಳಲು, ನಿಜದೇವಿಯು ಶಿವನ ಅಪ್ಪಣೆ ಯನ್ನು ಮೀರಲಾರದೆ ಹಾಗೆಯೇ ಮಾಡುವೆನೆಂದು ಹೇಳಿ ಅದನ್ನು ಹೊದೆಯಲಿಕ್ಕೆ ಪ್ರಾರಂಭಿಸಿದಳು. ಅಂದಿನಿಂದ ಅವಳಿಗೆ 'ಬೊಂತಾ ದೇವಿ' ಎಂಬ ಹೆಸರು ಪ್ರಾಪ್ತವಾಯಿತು.

ಹೀಗೆ ಬೊಂತಾದೇವಿಯು ಮಾರ್ಗದಲ್ಲಿ ಅನೇಕ ಕಷ್ಟಗಳನ್ನು ಸಹಿ ಸುತ್ತ ಕಲ್ಯಾಣಪಟ್ಟಣಕ್ಕೆ ಬಂದು ತಲ್ಪಿದಳು. ಆದರೆ ಅವಳು ಅಲ್ಲಿ ತಾನಾರೆಂಬುದನ್ನು ಯಾರಿಗೂ ತಿಳಿಸಲಿಲ್ಲ. ಗುಪ್ತ ಭಕ್ತಿಯಿಂದ ಪಟ್ಟಣ ದಲ್ಲಿ ಇರಲಿಕ್ಕೆ ಹತ್ತಿದಳು. ಅವಳು ಬಸವೇಶ್ವರ, ಅಲ್ಲಮಪ್ರಭು ಮೊದ ಲಾದ ಶಿವಶರಣರಿದ್ದ ಶಿವಾನುಭವಮಂಟಪವನ್ನು ಸೇರಿ, ಅಲ್ಲಿ ನಡೆ ಯುತ್ತಿದ್ದ ಶಿವಾನುಭವವನ್ನು ಆಲಿಸುವವಳಾದಳು. ಇಷ್ಟೇ ಅಲ್ಲ, ಅವಳೂ

ತನ್ನ ಶಿವಾನುಭವವನ್ನು ವಚನಗಳ ಮೂಲಕ ನಿರೂಪಿಸುವವಳಾದಳು. ಅವಳು ಬಸವೇಶ್ವರನ ಸನ್ನಿಧಿಯಲ್ಲಿ ಅವನ ದಿವ್ಯವಾದ ಮಂದಿರದಲ್ಲಿರಲಿ, ಇಲ್ಲವೆ ಪಟ್ಟಣದಲ್ಲಿದ್ದ ಶಿಷ್ಟೆಗಳ ಮೇಲಿರಲಿ, ಅವೆಲ್ಲವೂ ಸರಿ ಎಂದು ಭಾವಿಸಿ ಕಲ್ಯಾಣಪಟ್ಟಣದಲ್ಲಿ ಕಾಲಕಳೆಯುಹತ್ತಿದಳು. ಆದರೆ ಅವ ಳಾರೆಂಬುದನ್ನು ಯಾರೂ ಅರಿತಿರಲಿಲ್ಲ. ಅವಳನ್ನು ಅರಿತವನು ಶಿವ ಜ್ಞಾನಿಯಾದ ಅಲ್ಲಮಪ್ರಭುವು ಮಾತ್ರ.

ಹೀಗೆ ಬೊಂತಾದೇವಿಗೆ ಅನೇಕ ವರ್ಷಗಳು ಸಂದಿಹೋದವು. ಮುಂದೆ ಪಟ್ಟಣದಲ್ಲಿ ಮಧುವರಸ ಹರಳಯ್ಯಗಳ ಮೂಲಕ ಬಿಜ್ಜಳನಿಗೂ ಶಿವಶರಣರಿಗೂ ಮನಸ್ತಾಪಗಳುಂಟಾದವು. ಬಿಜ್ಜಳನು ಹರಳಯ್ಯ ಮಧು ವಯ್ಯಗಳನ್ನು ಕೊಲೆಬಡಿಸಿದನು. ಇದರಿಂದ ಪಟ್ಟಣದಲ್ಲಿ ರಕ್ತಪಾತ ಗಳುಂಟಾದವು. ಬಹುಜನ ಶಿವಶರಣರು ಪಟ್ಟಣವನ್ನು ಬಿಟ್ಟು ತೊಲ ಗಿದರು. ಆಗ ಮಹಾದೇವಿಯಕ್ಕನೂ ಶ್ರೀಶೈಲಕ್ಕೆ ಹೊರಡಲು ಸನ್ನದ್ಧ ಳಾದಳು. ಅವಳು ಹೋಗುವವನ್ನು ನೋಡಿ ಶಿವಶರಣರು— ಮಹಾ ದೇವಿಯಕ್ಕನಂಥ ವೀರಭಕ್ತೆಯರು ಕಲ್ಯಾಣದಲ್ಲುಂಟೇ? ಎಂದು ದುಃಖಿ ಸುತ್ತಿರಲು, ಅಲ್ಲಮಪ್ರಭುವು ಅದನ್ನು ಕೇಳಿ, ಬೊಂತಾದೇವಿಯನ್ನು ಅವರಿಗೆ ತೋರಿಸಿ ನಿಮಗೆ ಗೊತ್ತಿಲ್ಲ. ಇಗೋ ಈ ಬೊಂತಾದೇವಿಯು ಇಲ್ಲಿದ್ದಾಳೆ. ಇವಳು ಕಾಶ್ಮೀರದೇಶದ ಅರಸನ ಕುವರಿಯು. ಇವಳ ಚರಿತೆಯು ಮಹಾದೇವಿಯಕ್ಕನಕಿಂತಲೂ ಬಹಳ ಹೆಚ್ಚಿನದು. ವೀರವಿರಕ್ತಿ ಭಾವವುಳ್ಳವಳು. ಅವಳು ಇಂಥ ಸಮಯದಲ್ಲಿ ಕಲ್ಯಾಣಪಟ್ಟಣವನ್ನು ತೊರೆದು ಹೋಗುವವಳಲ್ಲ. ಅವಳು ಇಲ್ಲಿಯೇ ಇರುವಳು ಎಂದು ಆಕೆಯ ಮಹತ್ವವನ್ನು ಅವರಿಗೆ ವಿವರಿಸಿ, ಅವರನ್ನು ಸಂತೈಸಿ, ತಾನು ಶ್ರೀಶೈಲಕ್ಕೆ ಹೊರಡುವವನಾದನು.

ಬೊಂತಾದೇವಿಯು ಕಡೆಯುವರೆಗೆ ಕಲ್ಯಾಣಪಟ್ಟಣದಲ್ಲಿಯೇ ಉಳಿದು ಅಲ್ಲಿಯೇ ತನ್ನ ಇಷ್ಟಲಿಂಗದಲ್ಲಿ ಅಡಗಿದಳು. ಆ ಸಮಯದಲ್ಲಿ ಒಂದು ಅದ್ಭುತವಾಯಿತು. ಅವಳು ತಾನುಟ್ಟಿದ್ದ ಶಿವನು ಕೊಟ್ಟಿದ್ದ ಬೊಂತೆಯನ್ನು ಗಗನಕ್ಕೆ ಹಾರಿಸಲು ಅದು ಅಲ್ಲಿಯೇ ಬಯಲಾಯಿತು ಮತ್ತು ಅದರೊಡನೆಯೇ ತಾನೂ ನಿರವಯವನ್ನು ಹೊಂದಿದಳು.

ಬೊಂತಾದೇವಿಯು ವಚನಕಾರ್ತಿಯು. ಅವಳ ಎರಡು ವಚನ ಗಳು ಮಾತ್ರ ನಮಗೆ ಉಪಲಬ್ಧವಾಗಿವೆ. ಅವುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

ಬೊಂತಾದೇವಿಗೆ ಬೆಂತಲಾದೇವಿ ಎಂಬ ಇನ್ನೊಂದು ಹೆಸರಿದೆ. ಪುರಾತನ ದೇವಿಯರ ತ್ರಿವಿಧಿಯಲ್ಲಿ ಈಕೆಯ ವಿಷಯವಾಗಿ ಹೇಳಿರುವದೇನೆಂದರೆ—

ಭ್ರಾಂತಿ ಭ್ರಮೆಗಳನಳಿದು ಕಂತು ಕಾಲರನೊದೆದು
ಅಂತಕಾಂತಕನ ಧ್ಯಾನ ಮುಪ್ಪುರಿಗೊಂಡ
ಬೆಂತಲಾದೇವಿ ಶರಣಾಗು.

ಇದರಲ್ಲಿ ಬೊಂತಾದೇವಿಯು ನಿಜವನ್ನರಿತವಳು, ಕಾಮನನ್ನೂ ಯಮನನ್ನೂ ಜಯಿಸಿದವಳು ಎಂದು ಕವಿಯು ಹೇಳಿ ಅವಳು ಪರಮಾತ್ಮನ ಧ್ಯಾನದಲ್ಲಿ ಅತ್ಯಂತವಾಗಿ ನಿರತಳಾದವಳು ಎಂದು ಅವಳನ್ನು ಸ್ಮರಿಸಿದ್ದಾನೆ.

**ವಚನಗಳು.**

(೧) ಊರೊಳಗಣ ಬಯಲು, ಊರಹೊರಗಣ ಬಯಲು ಎಂದುಂಟೇ? ಊರೊಳಗಣ ಬ್ರಾಹ್ಮಣ ಬಯಲು, ಊರಹೊರಗಣ ಹೊಲೆಯ ಬಯಲೆಂದುಂಟೇ? ಎಲ್ಲ ನೋಡಿದರೆ ಬಯಲೊಂದೇ. ಭಿತ್ತಿಯಿಂದೊಳಹೊರಗೆಂಬ ನಾಮಸ್ಥೈಸೆ. ಎಲ್ಲಿ ನೋಡಿ ಕರೆದರೆ ಓ ಎಂಬಾತನೇ ಬಿಡಾಡಿ.

ಭಾವಃ—ಜಾತಿಭೇದವೆಂಬುದಿಲ್ಲ. ಅದು ಕೃತ್ರಿಮವಾದುದು ಎಂಬುವನ್ನು ಬೊಂತಾದೇವಿಯು ಅತ್ಯಂತ ತಾತ್ವಿಕರೀತಿಯಿಂದ ಈ ವಚನದಲ್ಲಿ ಬೋಧಿಸಿದ್ದಾಳೆ.

(೨) ಪರಮಪ್ಪ ನಾಥ ಎಂಬ ಲಿಂಗ ತರಗೆಲೆಗಳಿಗೊಂದೇ ಗಾಳಿ ಹಾರುತಿಪ್ಪ ಒಂದೇ ಅನಿಲನಿಂದ ದೇಹ ಸರಪಟ್ಟಗಳೊಳಗೆಲ್ಲ ಕರೆದರೆ ಓ ಎಂಬಾತನೇ ಬಿಡಾಡಿ.

ಭಾವಃ— ವಚನವು ಅಶುದ್ಧವಿದೆ. ಆದರೆ ಭಾವವು ೧ನೇ ವಚನದಲ್ಲಿದ್ದಂತೆಯೇ ಇರುತ್ತಿದೆಂದು ತೋರುತ್ತಿದೆ.

ಈಕೆಯ ಮುದ್ರಿಕೆಯು 'ಓ ಎಂಬಾತನೇ ಬಿಡಾಡಿ' ಎಂದಿದ್ದು ಇದರಮೇಲಿಂದ ಪರಮಾತ್ಮನ ಸ್ವರೂಪನ್ನು ಕುರಿತು ಅವಳ ವಚನಗಳಲ್ಲಿ ನಿರೂಪಣೆ ಹೆಚ್ಚಾಗಿ ಇದ್ದುದಾಗಿ ನಾವು ಊಹಿಸುತ್ತೇವೆ.

---

೧೦ನೇ ವಚನವು ಬಹು ಅಶುದ್ಧವಿದೆ. ಆದ್ದರಿಂದ ಅದನ್ನು ಇಲ್ಲಿ ಉದಹರಿಸಿಲ್ಲ.

ಹಿಂಸೆ, ಮತ್ತು ಅಹಿಂಸೆ ಇವುಗಳ ತಾತ್ವಿಕ ವಿವೇಚನೆಯು ಮೇಲಿನ ವಚನಗಳಲ್ಲಿ ಇರುತ್ತದೆ. ಪ್ರತಿಯೊಂದು ವಚನವು ಅತ್ಯಂತ ಮಹತ್ವದ್ದಿರುವದರಿಂದ ನಮಗೆ ದೊರೆದ ಎಲ್ಲ ವಚನಗಳನ್ನು ಇಲ್ಲಿ ಉದಹರಿಸಿದ್ದೇವೆ.

---

## ಹಾವಿನಹಾಳ ಕಲ್ಲಯ್ಯ

ವಿಜಾಪುರ ಪಟ್ಟಣದ ವಾಯುವ್ಯ ದಿಕ್ಕಿಗೆ ೩೬ ಮೈಲುಗಳ ಮೇಲೆ ಹಾವಿನಹಾಳ ಎಂಬ ಹೆಸರಿನ ಗ್ರಾಮವಿದೆ. ಅಲ್ಲಿ ಶಿವನಯ್ಯನೆಂಬ ಅಕ್ಕಸಾಲಿಗನೂ ಅವನ ಹೆಂಡತಿ ಸೋಮವ್ವೆ ಎಂಬವಳೂ ವಾಸ ಮಾಡುತ್ತಿದ್ದರು. ಅವರು ಅಕ್ಕಸಾಲೆಯ ಕಾಯಕವನ್ನು ಮಾಡುತ್ತ ಉಪಜೀವಿಸುವವರಾಗಿದ್ದರು. ಅವರಿದ್ದ ಗ್ರಾಮದಲ್ಲಿ ಕಲ್ಲಿನಾಥನ ದೇವಾಲಯವಿದ್ದು ತಮಗೊಬ್ಬ ಮಗನನ್ನು ಕೊಡಬೇಕೆಂದು ದೇವರಿಗೆ ಬೇಡಿಕೊಳ್ಳಲು ಒಬ್ಬ ಪುತ್ರನು ಜನಿಸಿದನು. ಅವನಿಗೆ ಕಲ್ಲಯ್ಯನೆಂದು ಕಲ್ಲಿನಾಥನ ಹೆಸರನ್ನೇ ಇಟ್ಟು ಅವನನ್ನು ಪ್ರೀತಿಯಿಂದ ಬೆಳೆಯಿಸುತ್ತ ಬಂದರು. ಅವನು ದೊಡ್ಡವನಾದ ಬಳಿಕ ಅವನಿಗೆ ತಮ್ಮ ಕುಲದ ಉದ್ಯೋಗವಾದ ಚಿನ್ನಗಾಯಕವನ್ನು ಚನ್ನಾಗಿ ಅರುಹಿ ಅದರಲ್ಲಿ ಅವನನ್ನು ನಿಷ್ಣಾತನನ್ನಾಗಿ ಮಾಡಿದರು. ಆದರೆ ಕಲ್ಲಯ್ಯನು ಕಲ್ಲಿನಾಥನ ಬಗ್ಗೆ ಅತ್ಯಂತ ಭಕ್ತಿಭಾವವನ್ನು ತಾಳಿದವನಾಗಿ ದಿನಾಲು ಶಿವಾರ್ಚನೆಯನ್ನು ಮಾಡಿ ದೇವರನ್ನು ಸ್ತುತಿಸುವದರಲ್ಲಿಯೇ ತನ್ನ ವೇಳೆಯನ್ನೆಲ್ಲ ಕಳೆಯುವನು. ಅವನಲ್ಲಿ ಪರಮಾತ್ಮನ ಬಗ್ಗೆ ಹೆಚ್ಚು ಹೆಚ್ಚು ಅನುರಾಗವು ಉಂಟಾಗಿ, ಅವನ ಧ್ಯಾನದಲ್ಲಿಯೇ ಯಾವಾಗಲೂ ಉಳಿದು ಬಿಡುವನು.

ಹೀಗಿರುವಲ್ಲಿ ಹಾವಿನಹಾಳ ಗ್ರಾಮದಿಂದ ೧೪ ಮೈಲುಗಳ ಮೇಲಿರುವ ಮಂಗಳವಾಡದಲ್ಲಿ ಬಿಜ್ಜಳ ನೃಪನು ರಾಜ್ಯವಾಳುತ್ತಿರಲು ಅವನು

ಅಕ್ಕಸಾಲಿಗ ಕೆಲಸದಲ್ಲಿ ಶಿವನಯ್ಯನ ಮತ್ತು ಆವನ ಮಗ ಕಲ್ಲಯ್ಯನ ಜಾಣ್ಮೆಯನ್ನು ಕೇಳಿದವನಾಗಿ ಚಿನ್ನದ ಒಂದು ಸಾವಿರದ ಗಟ್ಟಿಯನ್ನು ತನ್ನ ಮನೆಯ ನಾಯಕನಾದ ಕಟಿಕಿಲ ನಾರಣಸಂಬವನ ಕಡೆಗೆ ಕೊಟ್ಟು ಈ ಚಿನ್ನದಿಂದ ಒಂದು ಸುಂದರವಾದ ಉತ್ತರಿಗೆಯನ್ನು ಅವರಿಂದ ಮಾಡಿಸಬೇಕೆಂದು ಹೇಳಿಕಳುಹಿದನು. ಆದರಂತೆ ಆ ಗಟ್ಟಿಯನ್ನು ಶಿವನಯ್ಯನ ಕಡೆಗೆ ಕೊಟ್ಟು ನಾರಣನು ರಾಜಧಾನಿಗೆ ತಿರುಗಿ ಹೋದನು.

ಶಿವನಯ್ಯನು ಆ ಗಟ್ಟಿಯನ್ನು ಆನಂದದಿಂದ ಸ್ವೀಕರಿಸಿ ತಾನು ಕೈಕೊಂಡ ಕೆಲಸವನ್ನು ಮಾಡಹತ್ತಲು ಅದು ತನ್ನ ವಶವಲ್ಲವೆಂದು ತೋರಹತ್ತಿತು. ಅದು ತನ್ನ ಮಗನಿಗೆ ಮಾತ್ರ ಸಾಧ್ಯವೆಂದು ತಿಳಿದವನಾಗಿ ತನ್ನ ಮನದಲ್ಲಿ—ನನ್ನ ಮಗನು ಯಾವ ಕೆಲಸವನ್ನೂ ಮಾಡುವದಿಲ್ಲ, ಅವನಿಗೆ ಶಿವನ ಹುಚ್ಚು ಹಿಡಿದಿದೆ, ಅವನು ಮನೆವಾರ್ತೆಯನ್ನು ಲಕ್ಷಿಸನು, ಎಂದು ಚಿಂತಿಸುತ್ತಿರಲು, ಮರುದಿನ ಮಧ್ಯರಾತ್ರಿಯಲ್ಲಿ ತನ್ನ ಮಗನನ್ನೆಬ್ಬಿಸಿ ಅವನಿಗೆ—ಎಲೋ ಮಗನೇ ಹೀಗೆ ಜಗದೊಳಗೆ ಅನುದ್ಯೋಗಿಯಾಗಿರುವದು ಸರಿಯೇ? ಅಕಟಕಟಾ! ನೀನು ಹೀಗೆ ಎಂದಾದರೂ ಕಾಲಕಳೆಯಬೇಕೇ? ನೀನು ಕಲ್ಲಿನಾಥನ ದೇವಾಲಯವೆಂದರೆ ಅಲ್ಲಿಗೆ ಹೋಗಿಬಿಡುತ್ತೀ. ಹೀಗಾದರೆ ನೀನು ಹೇಗೆ ಧನವನ್ನು ಗಳಿಸುವಿ? ಉದ್ಯೋಗ ಮಾಡದೆ ಹೋದರೆ ಪರಮಾತ್ಮನು ಎಂದಿಗಾದರೂ ತಾನಾಗಿ ನಿನಗೆ ಕೊಡುವನೇ? ಜಗತ್ತಿನಲ್ಲಿ ನಿನ್ನ ಹಸ್ತಕೌಶಲ್ಯಕ್ಕೆ ಯಾರೂ ಎಣೆ ಇಲ್ಲ. ಪ್ರಾಯದಲ್ಲಿ ನೀನು ಹಣಗಳಿಸದಿದ್ದರೆ ಮುಪ್ಪಿನ ಕಾಲದಲ್ಲಿ ಅದನ್ನು ಗಳಿಸುವದು ಹೇಗೆ? ನೀನು ಕಲ್ಲಿನಾಥನ ದೇವಾಲಯಕ್ಕೆ ಹೋಗುವದನ್ನು ನಾನು ನಿಲ್ಲಿಸಿಬಿಡುವೆನು ಎಂದು ತಂದೆಯು ನಿಷ್ಠುರವಾಗಿ ಹೇಳಿದನು.

ಆಗ ಕಲ್ಲಯ್ಯನು ಅತ್ಯಂತ ಮನಸ್ಸಿನಲ್ಲಿ ನೊಂದು ಬಹಳ ಶೋಕವನ್ನು ತಾಳಿ ಕಡುಗೋಪದಿಂದ ತಂದೆಗೆ—ನೀನು ನನ್ನನ್ನು ಕೊಂದರೂ, ಕಡಿದರೂ, ಸೀಳಿದರೂ, ಹೋಳಿದರೂ, ನಾನು ಕಲ್ಲಿನಾಥನ ಪಾದವನ್ನು ಬಿಡೆನು. ಫಡ! ಫಡ!! ನೀನೆಲ್ಲಿಯ ತಂದೆ? ನಾನೆಲ್ಲಿಯ ನಿನ್ನ ಮಗ? ನನಗೆ ವೃಷಭನೇ ತಾಯಿತಂದೆ. ಸತ್ತು ಹೋಗುವ

ನಿನ್ನಂಥ ತಂದೆ ತಾಯಿಗಳು ನನಗೆ ಬೇಡ. ನನಗೆ ಈ ಪ್ರಪಂಚವು ಬೇಡ, ಎಂದೆನ್ನಲು, ಶಿವನಯ್ಯನು ಅತ್ಯಂತ ಉಗ್ರ ಕೋಪವನ್ನು ತಾಳಿ ತನ್ನ ಮಗನನ್ನು ಒಳಿತಾಗಿ ತಳಿಸಿದನು.

ಆಗ ಕಲ್ಲಯ್ಯನು ಮತ್ತಿಷ್ಟು ಕೆರಳಿದವನಾಗಿ, ಕೋಪದಿಂದ ಅವನ ಮೆಯ್ಯು ನಡುಗುತ್ತಿರಲು— ನಾನು ಇನ್ನುಮೇಲೆ ಈ ಲೋಕದಲ್ಲಿ ಇರಲಾರೆನು ಎಂದು ನುಡಿದು ಕಠಾರಿಯೊಂದನ್ನು ತೆಗೆದುಕೊಂಡು ಕಲ್ಲಿನಾಥನ ದೇವಾಲಯಕ್ಕೆ ಬಂದು ದೇವರೆದುರಿಗೆ ನಿಂತು— ಎಲೋ ದೇವರೇ, ನೀನಿರಲು ತಂದೆಯು ನನಗೆ ಹೀಗೆ ಬಡಿಯಬೇಕೇ? ಅವನು ತಂದೆಯಲ್ಲ. ನೀನೇ ನನಗೆ ತಂದೆಯು, ಎಂದೆನ್ನುತ್ತ, ತನ್ನ ಕಯ್ಯಲ್ಲಿದ್ದ ಕಠಾರಿಯಿಂದ ತನ್ನ ಹೊಟ್ಟೆಯನ್ನು ಇರಿದುಕೊಂಡನು. ಆಗ ಅವನ ಕರುಳುಗಳು ಹೊರಬಿದ್ದವು. ನೆತ್ತರು ಸುತ್ತಲೂ ಹರಿಯತೊಡಗಿತು. ಆಗ ಕಲ್ಲಯ್ಯನು ಕಲ್ಲಿನಾಥನನ್ನು ಬಿಗಿದಪ್ಪಿ ಅವನ ಧ್ಯಾನದಲ್ಲಿರಲು ಪರಮಾತ್ಮನು ಅವನಿಗೆ— ಎಲೋ ಕಲ್ಲಯ್ಯನೇ, ಹೀಗೆ ಮಾಡದಿರು. ನೀನು ಮುಂದೆ ವೇದಬೋಧಕರನ್ನು ಗೆಲ್ಲಬೇಕಾಗಿದೆ. ನಿನ್ನಿಂದ ಅನೇಕ ಮಹತ್ವದ ಕಾರ್ಯಗಳಾಗಬೇಕಾಗಿವೆ. ರೇವಣಸಿದ್ಧನ ಮಗನಾದ ರುದ್ರಮುನಿಯು ಅತ್ಯಂತ ಜ್ಞಾನಿಯು. ಅವನು ನಿನಗೆ ಗುರುವಾಗಿ ಬರುವವನಾಗಿದ್ದಾನೆ. ಅವನನ್ನು ನೀನು ಕಾಣು. ಅಂಜದಿರು ಎಂದು ಪ್ರತ್ಯಕ್ಷವಾಗಿ ಬುದ್ಧೀ ಹೇಳಿದಂತೆ ಕೇಳಿಸಿತು.

ಅಷ್ಟರಲ್ಲಿ ಪೂಜಾರಿಯು ಬಂದು ದೇವಾಲಯದ ಬಾಗಿಲನ್ನು ತೆರೆದುನೋಡಲು ಸುತ್ತಲೂ ನೆತ್ತರು ಚೆಲ್ಲಿತ್ತು, ಕಲ್ಲಯ್ಯನು ದೇವರ ಪಾದದೆಡೆಯಲ್ಲಿ ತಲೆ ಇಟ್ಟು ಮೂರ್ಛೆಹೋಗಿದ್ದನು. ಅದನ್ನು ಅವನು ಕಂಡು ಅಲ್ಲಿ ನಿಲ್ಲಲಂಜಿ, ಊರ ಜನರಿಗೆ ಅದನ್ನು ತಿಳಿಸಲು ತಾಯಿ ತಂದೆಗಳೂ ಊರವರೂ ಅಲ್ಲಿಗೆ ಬಂದು ಕಲ್ಲಯ್ಯನನ್ನು ಮೇಲಕ್ಕೆಬ್ಬಿಸಿ, ಹೊರಗೆ ಬಿದ್ದ ಕರುಳುಗಳನ್ನು ಹೊಟ್ಟೆಯಲ್ಲಿ ಸೇರಿಸಿ ದೇವರ ಪ್ರಸಾದವನ್ನು ಮೇಲೆ ಹಚ್ಚಿ, ವಿಭೂತಿಯನ್ನು ಮೆಯ್ಯಲ್ಲಿ ಉದ್ಧೂಳಿಸಿ ಉಪಚರಿಸುತ್ತಿರಲು ಕಲ್ಲಯ್ಯನು ಮೂರ್ಛೆ ತಿಳಿದು ಎಚ್ಚತ್ತನು. ಅವನು ಜೀವಂತನಾದನೆಂಬುದನ್ನು ಪುರಜನರೆಲ್ಲರೂ ನೋಡಿ ಹರುಷಿತರಾಗಿ ಅವನನ್ನು ಮನೆಗೆ ಕಳಿಸಿಕೊಟ್ಟರು.

ಆಮೇಲೆ ಕೆಲವು ದಿನಗಳು ಹೋಗಲು ರೇವಣಸಿದ್ಧೇಶ್ವರನು ಹಾವಿನಹಾಳ ಗ್ರಾಮಕ್ಕೆ ಬರುವವನಾದನು. ಆಗ ಕಲ್ಲಯ್ಯನು ಅವನನ್ನು ಕಂಡು ಅವನ ಪಾದದಲ್ಲಿ ಬಿದ್ದು—ಎಲೇ ಗುರುವೇ ನೀನು ನನಗೆ ಕರುಣಿಸು ಎಂದು ಹೇಳಲು, ರೇವಣಸಿದ್ಧನು ತನ್ನ ಮುಂದೆ ನಿಂತಿದ್ದ ತನ್ನ ಮಗನಾದ ರುದ್ರಮುನಿಗೆ—ನೀನು ಈ ಕಲ್ಲಯ್ಯನಿಗೆ ದೀಕ್ಷೆಯನ್ನು ಕೊಡು, ಎಂದು ಹೇಳಲು ರುದ್ರಮುನಿಯು ಅವನಿಗೆ ತಾನು ಗುರುವಾಗಿ ಶ್ರೇಷ್ಠತರವಾದ ಶಿವಜ್ಞಾನವನ್ನು ಬೋಧಿಸಿ ದೀಕ್ಷೆಯನ್ನು ಮಾಡುವವನಾದನು.

ಅಂದಿನಿಂದ ಕಲ್ಲಯ್ಯನು ಶಿವಾನುಭವ ಶಾಸ್ತ್ರವನ್ನು ಅಭ್ಯಸಿಸುವವನಾದನು. ಪರಮಾತ್ಮನ ಕೇವಲ ಭಕ್ತನಾಗಿ ಶಿವಾನುಭವದಲ್ಲಿರಹತ್ತಿದನು. ಯಾವಾಗಲೂ ಹರಶರಣರೊಡನೆ ಇರುವನು. ಪುರಾತನರ ವಚನಗಳನ್ನು ಹಾಡುವನು. ಆಗ ದೇಶದಲ್ಲಿದ್ದ ಲೋಕಾಯುತರನ್ನೂ, ಬೌದ್ಧರನ್ನೂ, ವಿಪ್ರರನ್ನೂ, ಚಾರ್ವಾಕರನ್ನೂ ಶಾಸ್ತ್ರಮುಖದಿಂದ ಸೋಲಿಸಿ, ಲೋಕದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದನು.

ಹೀಗಿರುವಲ್ಲಿ ಅವನು ಒಂದು ದಿವಸ ಕಲ್ಲಿನಾಥನನ್ನು ಪೂಜಿಸುತ್ತಿರಲು ಒಂದು ಸರ್ಪವು ಅವನ ಹಿಂಬದಿಗೆ ಬಂದು ಅವನನ್ನು ಕಚ್ಚಿತು. ಆದರೆ ಅದರ ವಿಷವು ಅವನಿಗೆ ಏನೂ ಬಾಧೆಮಾಡಲಿಲ್ಲ, ಇಷ್ಟೇಅಲ್ಲ, ಆ ಸರ್ಪವೇ ಅವನ ಹಿಂದೆ ಸತ್ತುಬಿದ್ದಿತು. ಕಲ್ಲಯ್ಯನಿಗೆ ಅದು ಗೊತ್ತಾಗಲು ಅವನು ಮನಸ್ಸು ನೊಂದವನಾಗಿ—ಎಲೋ ದೇವನೇ, ನಾನು ಎಷ್ಟು ನಿಷ್ಠುರನು! ನಾನು ವಿಷಕ್ಕೆ ವಿಷವಾಗಿ ನಿಂದೆನೇ? ಈ ಹಾವು ನನ್ನಿಂದ ಸತ್ತಿತೇ? ಎಂದು ಶೋಕಿಸುತ್ತ, ಈ ಹಾವು ಬದುಕಲಿ ಎಂದೆನ್ನಲು ಅದಕ್ಕೆ ಕೂಡಲೆ ಜೀವವು ಬಂದಿತು ಮತ್ತು ಅದು ಅತ್ತಿತ್ತ ಹರಿದಾಡಹತ್ತಿತು. ಆಗ ನೆರೆದ ಜನರು ಕಲ್ಲಯ್ಯನ ಮೇಲಿನ ಪರಮಾತ್ಮನ ಕೃಪೆಯು ಎಷ್ಟು ಘನತರವಾದದ್ದು, ಎಂದು ಕೌತುಕಬಡುತ್ತ ಪರಮಾತ್ಮನನ್ನು ಸ್ತುತಿಸುವವರಾದರು. ಹೀಗೆ ಕಲ್ಲಯ್ಯನು ಹಾವಿನಹಾಳದಲ್ಲಿ ಅತ್ಯಂತ ಭಕ್ತಿಯಿಂದ ಕಾಲಕಳೆಯುತ್ತ ಬಂದನು.

ಹೀಗಿರುವಲ್ಲಿ ಸೊನ್ನಲಿಗೆ ಎಂದರೆ ಈಗಿನ ಸೊಲ್ಲಾಪುರದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನ ಅತ್ಯಂತ ಪ್ರಸಿದ್ಧ ದೇವಾಲಯವಿದ್ದು

ಅಲ್ಲಿದ್ದ ಮಲ್ಲಿಕಾರ್ಜುನನ ಪ್ರಕಾಶದಂತೆಯೇ ಉನ್ನತವಾದ ಪ್ರಕಾಶ ವನ್ನು ಸಿದ್ಧರಾಮನೆಂಬ ಶಿವಯೋಗಿಯು ತಾಳಿದವನಾಗಿ ಲೋಕದಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದನು. ಆಗ ಕಲ್ಲಿನಾಥನು ಅವನ ಸ್ನೇಹವನ್ನು ಸಂಪಾದಿಸಬೇಕೆಂದು ಬಯಸಿ ಸೊನ್ನಲಾಪುರಕ್ಕೆ ಬಂದು ಅಲ್ಲಿಯೇ ಶಿವಾನುಭವದಲ್ಲಿ ಹಲವು ದಿನ ಕಾಲಕಳೆಯುವವನಾದನು. ಹೀಗಿರು ವಲ್ಲಿ ಅಲ್ಲಿ ಒಬ್ಬ ಭಕ್ತೆಯು ಶಿವನಲ್ಲಿ ಅತ್ಯಂತ ಭಕ್ತಿಭಾವವುಳ್ಳವ ಳಾಗಿ ಪುರಾತನರ ಸ್ತುತಿಗಳನ್ನು ಮಾಡುತ್ತಾ ಅವುಗಳಲ್ಲಿ ತಲ್ಲೀನ ಳಾಗಿರುವದನ್ನು ಕಲ್ಲಯ್ಯನು ದಿನಾಲು ನೋಡುತ್ತಿದ್ದನು. ಆಗ ಅವನು ಅವಳಲ್ಲಿ ಅನುರಾಗವನ್ನು ಹೊಂದಿ ಅವಳನ್ನು ಲಗ್ನವಾದನು. ಮುಂದೆ ಅವಳು ಗರ್ಭಿಣಿಯಾಗಿ ಒಬ್ಬ ಹೆಣ್ಣು ಮಗುವನ್ನು ಹೆತ್ತಳು. ಅವ ಳಿಗೆ ಕಲ್ಲಿನಾಥನ ಹೆಸರನ್ನೇ ಅಂದರೆ 'ಕಲ್ಲವ್ವೆ' ಎಂಬ ಹೆಸರಿಟ್ಟು ನಾಮಕರಣ ಮಾಡಿದನು. ಕಲ್ಲವ್ವೆಯು ತನ್ನ ತಂದೆಯಂತೆಯೇ ಶಿವಭಕ್ತಿಯಲ್ಲಿ ಬೆಳೆಯುವವಳಾದಳು.

ಕಲ್ಲಯ್ಯನು ಮಹಾಶಿವಜ್ಞಾನಿಯು. ಅವನು ತನ್ನ ಶಿವಾನುಭ ವವನ್ನು ವಚನಗಳ ಮೂಲಕ ಬೋಧಿಸಹತ್ತಿದನು. ಅವನ ವಚನ ಗಳಲ್ಲಿ ೬೦ ವಚನಗಳನ್ನು ನಾವು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಸಿದ್ಧಿಸಿದ್ದೇವೆ. ವಚನವಾಙ್ಮಯದಲ್ಲಿ ಅವನ ವಚನಗಳಿಗೆ ಉಚ್ಚ ಸ್ಥಾನವಿದೆ. ಅವು ಅತ್ಯಂತ ಮನೋಹರವೂ ಉಚ್ಚವಿಚಾರವುಳ್ಳವೂ ಇರುತ್ತವೆ. ಯಾವ ವಚನ ಸಂಗ್ರಹಕಾರನೂ ಕೂಡ ಅವುಗಳನ್ನು ತನ್ನ ಗ್ರಂಥದಲ್ಲಿ ಉದಹರಿಸದೆ ಬಿಟ್ಟಿಲ್ಲ. ಹಾಗೆಯೇ ಕಲ್ಲಯ್ಯನು ಬೋಧ ಕನೂ ಆಗಿದ್ದಾನೆ. ಅವನ ಹೆಸರಿನ ಸ್ಥಾನಗಳು ಕಲಬುರ್ಗಿ ಜಿಲ್ಲೆ ಯಲ್ಲಿ ಸುರಪುರದ ದಕ್ಷಿಣಕ್ಕೆ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿಗೆ ಸಮೀಪವಿದ್ದು ಅವುಗಳಲ್ಲಿ ಅವನ ಪ್ರಸಿದ್ಧಿಯು ಇದೆ. ಇದರಿಂದ ಅವನು ಶಿವಾನುಭವವನ್ನು ಬೋಧಿಸುತ್ತ ದೇಶದಲ್ಲಿ ಸಂಚಾರ ಮಾಡಿದ್ದು ಕಂಡು ಬರುತ್ತಿದೆ. ಮಹಾಪುರುಷರು ಹಲವು ದಿನ ವಾಸವಾಗಿದ್ದ ಗ್ರಾಮ ಗಳಿಗೆ ಅವರ ಮೂಲ ಗ್ರಾಮಗಳ ಹೆಸರುಗಳನ್ನು ಇಟ್ಟಿದ್ದು ಅನೇಕ ಕಡೆಗೆ ಕಂಡುಬರುತ್ತದೆ. ಆದ್ದರಿಂದ ಈ ಎರಡು ಗ್ರಾಮಗಳಿಗೂ 'ಹಾವಿನಹಾಳ' ಎಂಬ ಹೆಸರುಗಳು ಬಂದಿರಬಹುದು.

ಹೀಗೆ ಹಾವಿನಹಾಳ ಕಲ್ಲಯ್ಯನು ತನ್ನ ಗ್ರಾಮದಲ್ಲಿರುತ್ತಿರಲು ಒಂದು ದಿನ ಅವನ ಮಗಳು ಅವನ ಲಿಂಗಾರ್ಚನೆಗೆಂದು ಹೊಳೆ ಯಿಂದ ನೀರು ತರುತ್ತಿರಲು ದಾರಿಯಲ್ಲಿ ಸೋಮಯಾಜಿ ಎಂಬ ಬ್ರಾಹ್ಮಣನು ಅವಳನ್ನು ಆಕಸ್ಮಾತ್ತಾಗಿ ಮುಟ್ಟಲು ಆ ಬಾಲಿಕೆಯು ಭವಿಯು ಮುಟ್ಟಿದ ಉದಕವನ್ನು ತರಬಹುದೇ ಎಂದು ಹರಿವೆಯನ್ನು ಅಲ್ಲಿಯೇ ಒಡೆದುಬಿಟ್ಟಳು. ಆಗ ಆ ಬ್ರಾಹ್ಮಣನು ಕೋಪದಿಂದ ಅವಳು ಹೀಗೆ ಮಾಡಿದ್ದನ್ನು ಉಳಿದ ಬ್ರಾಹ್ಮಣರಿಗೆ ತಿಳಿಸಲು ಅವರೆಲ್ಲರು ನೆರೆದು ಕಲ್ಲಯ್ಯನ ಕಡೆಗೆ ಬಂದು— ನಿನ್ನ ಮಗಳನ್ನು ಸೋಮಯಾಜಿ ಗಳು ಮುಟ್ಟಿದ ಕೂಡಲೆ ಅವಳು ಹರಿವೆಯನ್ನು ಒಡೆದುಬಿಟ್ಟಳು. ಬ್ರಾಹ್ಮಣರನ್ನು ಮುಟ್ಟಿದರೆ ದೋಷವುಂಟೇ? ಅಷ್ಟಾದಶವರ್ಣಗಳಲ್ಲಿ ಬ್ರಾಹ್ಮಣರು ಶ್ರೇಷ್ಠರು. ಇಂಥವರನ್ನು ನೀವು ಮುಟ್ಟಲಾರದೇ? ಎಂದು ಕೇಳಿದರು.

ಕಲ್ಲಯ್ಯನು ಅವರ ಜಾತ್ಯಂಧತೆಯನ್ನು ತಿಳಿದವನಾಗಿ— ನನ್ನ ಮಗಳು ಮಾಡಿದ್ದು ಯೋಗ್ಯವು. ಶಿವನ ಭಕ್ತರ ಮನೆಯಲ್ಲಿದ್ದ ನಾಯಿ ಸಹ ಬ್ರಾಹ್ಮಣರನ್ನು ಮುಟ್ಟುವದಿಲ್ಲ. ಅಂದಬಳಿಕ ಪರಮಾತ್ಮನ ಭಕ್ತರು ನಿಮ್ಮಂಥವರನ್ನು ಎಂದಾದರೂ ಮುಟ್ಟಬಹುದೇ? ಎಂದ ನ್ನಲು ಬ್ರಾಹ್ಮಣರು— ನಾವು ನಾಯಿಗಿಂತ ಕಡೆಯಾದೆವೇ? ನಾವು ವೇದಗಳನ್ನು ಚನ್ನಾಗಿ ಪಠಿಸಬಲ್ಲವರು. ನೀನು ನಿನ್ನ ನಾಯಿಯಿಂದ ಆ ವೇದಗಳನ್ನು ಓದಿಸಿದರೆ ಮಾತ್ರ ನಾವು ಕಡಿಮೆ ಎಂದು ಒಪ್ಪು ತ್ತೇವೆ ಎಂದು ಹೇಳಿದರು.

ಆಗ ಕಲ್ಲಯ್ಯನು— ಹಾಗೆಯೇ ಆಗಲಿ. ನಾಯಿಯಿಂದಲೇ ವೇದ ವನ್ನು ಓದಿಸುವೆನು ಎಂದಂದು ತನ್ನ ಮನೆಯಲ್ಲಿ 'ಗಂಭೀರನಾದ' ಎಂಬ ಹೆಸರಿನ ಕಪ್ಪುಬಣ್ಣದ ನಾಯೊಂದಿತ್ತು, ಅದನ್ನು ಅವನು ಕರೆ ಯಲು ಅದು ಇದಿರಿಗೆ ಬಂದುನಿಂತಿತು. ಆಗ ಕಲ್ಲಯ್ಯನು ತನ್ನ ಮನದಲ್ಲಿ ಧ್ಯಾನಿಸುತ್ತ ಆ ನಾಯಿಗೆ— ಲಿಂಗೋಚ್ಛಿಷ್ಟವನ್ನು ದಿನಾಲು ನೀನು ಭುಂಜಿ ಸುತ್ತಿರುವಿ. ಗಂಭೀರನಾದನೇ, ವೇದವನ್ನು ಉಚ್ಚರಿಸಲು ಸಿದ್ಧನಾಗು ಎಂದು ಅದಕ್ಕೆ ಆಜ್ಞಾಪಿಸಿ ಆ ಬ್ರಾಹ್ಮಣರಿಗೆ— ನೀವು ಯಾವ ವೇದದ ಭಾಗವನ್ನು ಈ ನಾಯಿಯು ಓದಬೇಕೆಂದು ಅಪೇಕ್ಷಿಸುತ್ತೀರಿ ಎಂದು ಕೇಳಲು ಅವರು— ಯಜುರ್ವೇದವೆನಲು, ಆ ನಾಯಿಯು ತನ್ನ ಹೃದಯ

ಕಮಲದಲ್ಲಿ ಲಿಂಗಮೂರ್ತಿಯನ್ನು ನೆಲೆಗೊಳಿಸಿ ಆದಿಶಕ್ತಿಯನ್ನು ಪ್ರಸ್ಫುರಿಸಿ, ನಾಸಾಗ್ರದಲ್ಲಿ ಶಶಿ ರವಿಗಳನ್ನು ವೇಧಿಸುತ್ತ ಅಕ್ಷರತ್ರಯದ ಮೂಲಕ ಬಿಂದುನಾದ ಕಳೆಗಳನ್ನು ಸಮಗೊಳಿಸಿ ಉದಾತ್ತಾನುದಾತ್ತಗಳಿಂದ ಕೂಡಿಕೊಂಡು ಸುಸ್ವರದಿಂದ ವೇದ ಭಾಗವನ್ನು ನುಡಿಯಹತ್ತಿತು. ಅದನ್ನು ಕೇಳಿ ಎಲ್ಲರೂ ಅಚ್ಚರಿಗೊಂಡರು. ನೆರೆದ ವಿಪ್ರರು ಕಲ್ಲಯ್ಯನನ್ನು ಸ್ತೋತ್ರ ಮಾಡಿ ಅವನಿಗೆ ಸಾಷ್ಟಾಂಗವೆರಗಿದರು. ಆಗ ಕಲ್ಲಯ್ಯನು ಅವರನ್ನು ಕ್ಷಮಿಸಿ ಮನೆಗೆ ಕಳಿಸಿ ತನ್ನ ನಿತ್ಯದ ಲಿಂಗಾರ್ಚನೆಯನ್ನು ಮುಗಿಸಿದನು.

ಕಲ್ಲಯ್ಯನು ಶ್ರೀ ಸಿದ್ಧರಾಮನ ಭೆಟ್ಟಿಗೆಂದು ಆಗಿಂದಾಗ್ಗೆ ಸೊಲ್ಲಾಪುರಕ್ಕೆ ಹೋಗುತ್ತಿದ್ದನು. ಹಾವಿನಹಾಳು ಸೊಲ್ಲಾಪುರದಿಂದ ೧೪ ಮೈಲು ಮಾತ್ರ ದೂರವಿದೆ. ಸಿದ್ಧರಾಮನ ಸನ್ನಿಧಿಯಲ್ಲಿ ಅವನೂ ಕೇದಾರ ಗುರುಗಳೂ ಯಾವಾಗಲೂ ಶಿವಗೋಷ್ಠಿಯಲ್ಲಿ ಕಾಲಕಳೆಯುವರು. ಹೀಗಿರಲು ಕಲ್ಲಯ್ಯನಿಗೆ ಅವಸಾನ ಕಾಲವು ಪ್ರಾಪ್ತವಾಯಿತು. ಆಗ ಅವನು ಸೊನ್ನಲಿಗೆಯಲ್ಲಿಯೇ ಸಮಾಧಿಸ್ಥನಾದನು. ಅವನ ಸಮಾಧಿಯು ಸಿದ್ಧರಾಮೇಶ್ವರ ದೇವಾಲಯದ ಪ್ರಾಕಾರದಲ್ಲಿ ಈಗಲೂ ಕಾಣಬರುತ್ತಿದೆ. ಈ ಪ್ರಕಾರ ಹಾವಿನಹಾಳ ಕಲ್ಲಯ್ಯನು ಶಿವಾನುಭವಿಯಾಗಿ ವೀರಶೈವ ಧರ್ಮದ ವಿಶಾಲ ತತ್ವಗಳನ್ನು ವಚನಗಳ ಮೂಲಕ ಜನರಲ್ಲಿ ಬೋಧಿಸುತ್ತ ವೀರಶೈವ ಶರಣರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ್ದಾನೆ. ಅವನು ಸಂಸ್ಕೃತ ಬಲ್ಲವನೂ, ವೇದಶಾಸ್ತ್ರಾಗಮಗಳನ್ನು ಚನ್ನಾಗಿ ತಿಳಿದವನೂ ಆಗಿದ್ದನೆಂಬುದಕ್ಕೆ ಅವನ ವಚನಗಳೇ ಸಾಕ್ಷಿಯಾಗಿವೆ. ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಆದ್ದರಿಂದ ಅವನು ವೀರಶೈವರಿಗೆ ಅತ್ಯಂತ ಪೂಜ್ಯನಾಗಿದ್ದಾನೆ.

ಹಾವಿನಹಾಳ ಗ್ರಾಮದಲ್ಲಿ ಕಲ್ಲಿನಾಥನ ದೇವಾಲಯವು ಈಗಲೂ ಇದೆ. ಈ ಗ್ರಾಮದ ಪಕ್ಕದಲ್ಲಿ ಬೋರೀ ಹಳ್ಳವೆಂಬ ದೊಡ್ಡ ಹಳ್ಳವು ಹರಿಯುತ್ತಿದೆ. ಅದರ ದಂಡೆಗೆ ಸಮೀಪವಾಗಿಯೇ ಈ ಗುಡಿಯು ಇದೆ. ಪ್ರತಿ ವರ್ಷ ಈ ದೇವಾಲಯದ ಜಾತ್ರೆಯಾಗುತ್ತದೆ. ಆ ಕಾಲದಲ್ಲಿ ಜನರು ಕಲ್ಲಯ್ಯನ ಮಹಿಮೆಯನ್ನು ವರ್ಣಿಸುವ ಅವನ ಚರಿತ್ರೆಯನ್ನು ಕೇಳುವ ಸಾಂಪ್ರದಾಯವಿದೆ. ಈ ಗ್ರಾಮವಿದ್ದ ಪ್ರದೇಶದಲ್ಲಿಯೇ ರೇವ

ಣಸಿದ್ಧ, ರುದ್ರಮುನಿಗಳು ಒಂದು ಕಾಲದಲ್ಲಿ ವಾಸಮಾಡಿಕೊಂಡಿದ್ದ ಮಂಗಳವಾಡ, ಸಿದ್ಧನಕೆರೆ, ಮುಸನೂರು ಈ ಸ್ಥಳಗಳು ೧೫ ರಿಂದ ೧೮ ಮೈಲು ದೂರವಿವೆ.

ಹಾವಿನಹಾಳ ಕಲ್ಲಯ್ಯನ ಚರಿತ್ರೆಯಲ್ಲಿ ಬಸವೇಶ್ವರನ ಸಂಬಂಧವು ಬರುವದಿಲ್ಲ. ಅವನು ಕಲ್ಯಾಣಕ್ಕೆ ಹೋದದ್ದರ ಉಲ್ಲೇಖವು ಯಾವ ಗ್ರಂಥದಲ್ಲಿಯೂ ಇರುವದಿಲ್ಲ. ಆದ್ದರಿಂದ ಅವನು ಬಸವೇಶ್ವರನಕಿಂತಲೂ ಸ್ವಲ್ಪ ಹಿಂದಿನವನಾಗಿರಬೇಕು. ಬಿಜ್ಜಳನು ಮಂಗಳವಾಡದಲ್ಲಿ ಮೊದಲು ಮಂಡಲಾಧೀಶ್ವರನಾಗಿ ರಾಜ್ಯವಾಳಿದನು. ಆಗ ರೇವಣಸಿದ್ಧೇಶ್ವನು ಅಲ್ಲಿಗೆ ಬಂದು ತನ್ನ ಮಹಾತ್ಮ್ಯವನ್ನು ಪ್ರಕಟಮಾಡಿದ್ದಾನೆ. ಇದೇ ಕಾಲಕ್ಕೆಯೇ ಹಾವಿನಹಾಳ ಕಲ್ಲಯ್ಯನೂ ಪ್ರಸಿದ್ಧಿಗೆ ಬಂದಿರಬಹುದು. ಮುಂದೆ ಬಿಜ್ಜಳನು ಕಲ್ಯಾಣದ ಚಾಲುಕ್ಯರ ರಾಜ್ಯವನ್ನು ಆಕ್ರಮಿಸಿ ಚಕ್ರಾಧಿಪತಿಯಾದನು. ಆದರೆ ಆ ವರೆಗೆ ರೇವಣಸಿದ್ಧ ಮತ್ತು ಹಾವಿನಹಾಳ ಕಲ್ಲಯ್ಯಗಳು ಜೀವಿಸಿದ ಹಾಗೆ ತೋರುವದಿಲ್ಲ. ಆದರೆ ರುದ್ರಮುನಿಯು ಮಾತ್ರ ಕಲ್ಯಾಣದಲ್ಲಿದ್ದದ್ದರ ಉಲ್ಲೇಖಗಳಿರುತ್ತವೆ. ಆದ್ದರಿಂದ ಬಸವ ಮತ್ತು ರುದ್ರಮುನಿ ಇವರಕಿಂತಲೂ ಸ್ವಲ್ಪ ಮೊದಲು ಹಾವಿನಹಾಳ ಕಲ್ಲಯ್ಯನು ಪ್ರಸಿದ್ಧಿಗೆ ಬಂದು ಶಿವಾನುಭವದ ಕಾರ್ಯಗಳನ್ನು ಮಾಡಿ, ಸೊನ್ನಲಿಗೆಯಲ್ಲಿ ಅವಸಾನವನ್ನು ಹೊಂದಿರಬೇಕೆಂದು ತೋರುತ್ತದೆ.

---

## ಜಂಬೂರು ಮಹಾಕಾಳಯ್ಯ.

ವರ್ಣಾಶ್ರಮ ಧರ್ಮಿಗಳು ವೇದಾಧಿಕಾರವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಮಾತ್ರವಿದ್ದು ಬೇರೆ ಯಾವ ಸಮಾಜದವರಿಗೂ ಇಲ್ಲೆಂದು ಭಾವಿಸಿದ್ದಾರೆ. ಆದ್ದರಿಂದ ಅವರು ವೇದಗಳನ್ನು ಗುಪ್ತವಾಗಿಟ್ಟುಕೊಂಡು ಅವುಗಳ ಅಭ್ಯಾಸವನ್ನೂ ಪಠನವನ್ನೂ ಇತರರಿಗೆ ಹೇಳುವದಿಲ್ಲ. ಈಪ್ರಕಾರ ಅವರು ಹಿಂದೂಸಮಾಜದಲ್ಲಿ ಶ್ರೇಷ್ಠವರ್ಣದವರೆಂದೂ ಕೀಳುವರ್ಣದವರೆಂದೂ ಎರಡು ವಿಭಾಗಗಳನ್ನು ಕಲ್ಪಿಸಿದ್ದಾರೆ. ಇವರು ಬ್ರಾಹ್ಮಣ ಸ್ತ್ರೀಯು ಸಹ ಶೂದ್ರಳೆಂದು ಭಾವಿಸಿ ಅವಳಿಗೂ ವೇದಾ

ಧಿಕಾರವನ್ನು ಕೊಟ್ಟಿರುವದಿಲ್ಲ. ಆದರೆ ಹಿಂದೂ ಸಮಾಜದಲ್ಲಿ ಕೆಲವು ಧರ್ಮಗಳಿದ್ದು ಅವು ಈ ತತ್ವವನ್ನು ನಿರಾಕರಿಸಿ ಎಲ್ಲರಿಗೂ ಸಮಾನಾಧಿ ಕಾರವನ್ನು ಕೊಟ್ಟಿರುತ್ತವೆ. ಇಂಥ ಧರ್ಮಗಳಲ್ಲಿ ವೀರಶೈವ ಧರ್ಮವು ಒಂದಾಗಿರುತ್ತದೆ. ಆದ್ದರಿಂದ ಅದರಲ್ಲಿ ಆಗಿಹೋಗಿರುವ ಶಿವಶರಣರು ವೇದಗಳ ಬಗ್ಗೆ ಇಂಥ ಅಕುಂಚಿತ ವೃತ್ತಿಯನ್ನು ತಾಳಿರುವದಿಲ್ಲ. ಇದಕ್ಕೆ ಉದಾಹರಣೆಯಾಗಿ ಹಾವಿನಹಾಳ ಕಲ್ಲಯ್ಯನು ನಾಯಿಯಿಂದ ವೇದ ವನ್ನು ಓದಿಸಿದ್ದು ಇರುತ್ತದೆ. ಇದನ್ನು ಹಿಂದಿನ ಚರಿತ್ರೆಯಲ್ಲಿ ಹೇಳಿದೆ. ಅವನಂತೆಯೇ ಜಂಬೂರು ಮಹಾಕಾಳಯ್ಯನೆಂಬ ಇನ್ನೊಬ್ಬ ಶರಣನು ಆಚರಿಸಿದ್ದಾನೆ.

ಮಲೆಯ ದೇಶದಲ್ಲಿ ಹಿರಿಯಜಂಬೂರು ಎಂಬ ಹೆಸರಿನ ಗ್ರಾಮವಿದೆ. ಈ ಗ್ರಾಮವು ಈಗ ಶಿವಮೊಗ್ಗ ಜಿಲ್ಲೆಯಲ್ಲಿರುವ ಶಿರಾಳಕೊಪ್ಪಕ್ಕೆ ಪೂರ್ವದಿಕ್ಕಿನಲ್ಲಿ ನಾಲ್ಕು ಮೈಲು ದೂರವಿದೆ. ಇದಕ್ಕೆ ಸಮೀಪವಾಗಿಯೇ ಬಳ್ಳಿಗಾವಿ, ಅನಿಮಿಷಾರ್ಯಕ್ಷೇತ್ರ, ಉಡುಗಣಿ (ಉಡುತಡಿ) ಇವೇ ಮೊದಲಾದ ಶಿವಶರಣರ ಸ್ಥಾನಗಳಿವೆ. ಈ ಜಂಬೂರು ಗ್ರಾಮದಲ್ಲಿ ಮಹಾಕಾಳಯ್ಯನೆಂಬ ಒಬ್ಬ ಶ್ರೇಷ್ಠ ಶಿವಭಕ್ತನು ವಾಸಮಾಡಿಕೊಂಡಿದ್ದನು. ಅವನು ಶಿವಾನುಭವಿಯಾಗಿ ಅತ್ಯಂತ ಭಕ್ತಿಭಾವದಿಂದ ಲಿಂಗಾರ್ಚನೆಯನ್ನು ಮಾಡುತ್ತ ಲಿಂಗಾನುಸಂಧಾನಿಯಾಗಿ ಆಚರಿಸುತ್ತಲಿದ್ದನು. ಅವನ ಆಚರಣೆಯ ಮೂಲಕ ಅವನ ಪ್ರಾಣವು ಅವನ ಆಧೀನದಲ್ಲಿಯೇ ಉಳಿದು ಅವನು ತನ್ನ ಶಿರವನ್ನು ಲಿಂಗಕ್ಕೆ ಅರ್ಪಿಸಿದರೂ ಕೂಡ ಅದನ್ನು ಪುನಃ ಪಡೆದುಕೊಳ್ಳುವ ಸಾಮರ್ಥ್ಯವನ್ನು ಹೊಂದಿದನು. ಇದರಿಂದ ಅವನು ಶ್ರೇಷ್ಠ ಶಿವಭಕ್ತನು, ಮಹಿಮನು ಎಂದು ಖ್ಯಾತಿಯನ್ನು ಜನರಲ್ಲಿ ಪಡೆದವನಾದನು.

ಹೀಗಿರುವಲ್ಲಿ ಮಹಾಕಾಳಯ್ಯನಿದ್ದ ಗ್ರಾಮವು ಬ್ರಾಹ್ಮಣರ ಮಹತ್ವದ ಒಂದು ಅಗ್ರಹಾರವಾಗಿತ್ತು. ಅಲ್ಲಿ ಒಂದು ದಿನ ಬ್ರಾಹ್ಮಣರು ವೇದಪಠನವನ್ನು ಮಾಡುತ್ತ ಇದ್ದರು. ಆಗ ಮಹಾಕಾಳಯ್ಯನು ಅಲ್ಲಿಗೆ ಬರುವದನ್ನು ಬ್ರಾಹ್ಮಣರು ಕಂಡು ಅವನಿಗೆ–ಇಲ್ಲಿ ವೇದಪಠನವು ನಡಿದಿದೆ. ಇತ್ತ ಕಡೆಗೆ ನೀನು ಬರಬೇಡ ಎಂದೆನಲು ಅವನು ಅದೇಕೆಂದು ಕೇಳಲು ಅವರು––ಇಲ್ಲಿ ಹೋಮವನಿಕ್ಕಿದ್ದೇವೆ. ವೇದವನೋದುವದನ್ನು ಶಿವಭಕ್ತರು ಕೇಳಲಾಗದು. ಆದಕ್ಕೆ ಮಹಾಕಾಳಯ್ಯನು––ವೇದಜ್ಞನು

ವೀರಶೈವರು ಮತ್ತು
ಕನ್ನಡಿಗರು ಅವಶ್ಯವಾಗಿ ಸಂಗ್ರಹಿಸಬೇಕಾದ

ಇದೀಗ ಹೊರಬಿದ್ದ

**ಬೆಲೆಯುಳ್ಳ ಗ್ರಂಥ.**

---

# ಶಿವಶರಣರ ಚರಿತ್ರೆಗಳು.

---

ಬರೆದವರು

**ರಾ॥ ಬ॥ ಫ ಗು. ಹಳಕಟ್ಟಿ**

---

**ಬೆಲೆ ೧ ರೂ. ೧೨ ಆ.**

ಮ್ಯಾನೇಜರ---"**ಶಿವಾನುಭವ**" ವಿಜಾಪುರ.

R. N. B. 2554

**BOOK-POST.**

ಶ್ರೀ. ರಾ॥ ರಾ॥

*From,*
**Shivanubhava**
**Office**
**Bijapur.**


ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ವಿಜಾಪುರದಲ್ಲಿ ತಮ್ಮ [illegible] (ಅ) ನೇ ಮನೆಯಲ್ಲಿ ಪ್ರಸಿದ್ಧಿಸಿದರು.




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆವೆಚ್ಚಸಹಿತ ರೂ. ೪—೪—೦ ವ್ಹಿ. ಪಿ. ಖರ್ಚು ೦—೪—೦

ಸಂಪುಟ ೧೯] ಜನವರಿ ೧೯೪೫. [ಸಂಚಿಕೆ ೪

## ವಿಷಯಾನುಕ್ರಮಣಿಕೆ.

ಶಿವಾನುಭವ

ವರ್ಷ ೧೯ | ಜನವರಿ ೧೯೪೫. | ಸಂಚಿಕೆ ೪

## ಕಾಯಕವೇ ಕೈಲಾಸ.

( ಲೇಖಕರು:— ವಿದ್ವಾನ್ ಸಿದ್ಧವೀರಶಾಸ್ತ್ರಿ ಕಾವ್ಯತೀರ್ಥ ಹಿರೇವಡವಟ್ಟಿ
ಶಂಕರ ಸಂಸ್ಕೃತ ಕಾಲೇಜ ಯಾದಗಿರಿ. )

ಕಾಯಕವೆಂದರೆ ಕರ್ಮ, ಕೆಲಸವೆಂದು ಅರ್ಥವಾಗುತ್ತದೆ. " ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ " ಎಂಬಂತೆ ಪ್ರತಿಯೊಬ್ಬನು ಕೆಲಸ ಮಾಡಿದರೇನೇ ಸಂಪತ್ತನ್ನೂ ಕೀರ್ತಿಯನ್ನೂ ದೊರಕಿಸುತ್ತಾನೆ. ಇದನ್ನೇ ಭಗವದ್ಗೀತೆಯಲ್ಲಿ ಕೃಷ್ಣಪರಮಾತ್ಮನು " ಕರ್ಮಯೋಗ " ವೆಂದು ಹೇಳಿದ್ದಾನೆ. ಯಾರು ಫಲಾಪೇಕ್ಷೆಯಿಲ್ಲದೆ ಕಾರ್ಯ ಮಾಡುವರೋ ಅವರೇ ನನಗೆ ಪ್ರಿಯಕರರೆಂದು ಅವನು ಹೇಳಿದ್ದಾನೆ. ಅಂದರೆ ದೇವರು ಕಾಯಕ ಪ್ರಿಯನೆಂದು ತಿಳಿಯಿತು.

### ಕಾಯಕವನ್ನು ಏಕೆ ಮಾಡಬೇಕು ?

ಸಕಲ ಚರಾಚರಾತ್ಮಕವಾದ ಜಗತ್ತನ್ನೂ, ಸರ್ವ ಜೀವರಾಶಿಗಳನ್ನೂ ನಿರ್ಮಿಸಿದ ಕರ್ತೃವಿಗೆ ಮನುಷ್ಯನು ಕಾಯಕ ಮಾಡಬೇಕೆಂಬ ಉದ್ದೇಶವಿದೆ. ವಿಚಾರಿಸಿ ನೋಡಿರಿ. ಬಲವಾದ ವ್ಯಾಘ್ರಾದಿಗಳಿಗೆ ದುರ್ಬಲ ಪ್ರಾಣಿಗಳನ್ನೂ, ದೊಡ್ಡ ಪಕ್ಷಿಗಳ ಸಲುವಾಗಿ ಕ್ರಿಮಿಕೀಟಕಗಳನ್ನೂ, ದನಕರುಗಳಿಗೆ ಹುಲ್ಲು ಮೊದಲಾದ ಆಹಾರಗಳನ್ನೂ ನಿರ್ಮಿಸಿರುವಂತೆ ಮನುಷ್ಯನ ಜೀವನಕ್ಕೆ ಬೇಕಾದ ಸಕಲ ಭೋಗ್ಯವಸ್ತುಗಳನ್ನು ಸಿದ್ಧವಾದವುಗಳನ್ನು ಮಾಡಲಿಕ್ಕೆ ಬರುತ್ತಿದ್ದಿಲ್ಲವೇ ? ಬರುತ್ತಿತ್ತು. ಆದರೆ ಈ ಪ್ರಾಣಿಯು ಸರ್ವ ಪ್ರಾಣಿಗಳಿಗಿಂತಲೂ ಶ್ರೇಷ್ಠವಾದದ್ದೂ,

ಕಾರ್ಯಾಕಾರ್ಯ ಜ್ಞಾನವುಳ್ಳದ್ದೂ ಇರುತ್ತದೆ. ತನ್ನ ಆಹಾರವನ್ನೂ ತಾನೇ ಮಾಡಿಕೊಳ್ಳಲೆಂಬ ಉದ್ದೇಶದಿಂದ ಇದನ್ನು ಬಿಟ್ಟಿರುತ್ತಾನೆ. ಸುಭಾಷಿತವು ಹೀಗೆ ಇರುತ್ತದೆ

" ಆಹಾರ ನಿದ್ರಾಭಯ ಮೈಥುನಂ ಚ । ಸಮಾನಮೇತತ್ಪಶುಭಿರ್ನರಾಣಾಂ ॥ ಆಚಾರಮಸ್ಯಧಿಕೋನರಾಣಾ । ಮಾಚಾರ ಹೀನಃ ಪಶುಭಿಸ್ಸಮಾನಃ ॥

ಎನ್ನುವಂತೆ ಆಚಾರವೆಂದರೆ ಕಾರ್ಯಾಕಾರ್ಯ ಜ್ಞಾನದಿಂದ ಸತ್ಕರ್ಮಮಾಡುವದೆಂದರ್ಥ. ಇಲ್ಲದಿದ್ದರೆ ದ್ವಿಪಾದ ಪಶುವೆನ್ನಲು ಅಡ್ಡಿ ಇಲ್ಲ. ಇದೇ ವಿಷಯದಲ್ಲಿ ಭಗವದ್ಗೀತೆಯಲ್ಲಿ

" ಕರ್ಮಣ್ಯೇವಾಧಿಕಾರಸ್ತೇಮಾ ಫಲೇಷುಕದಾಚನ ಮಾ ಕರ್ಮಫಲ ಹೇತುರ್ಭೂರ್ಮಾತೆ ಸಂಗೋಽಸ್ತ್ವಕರ್ಮಣಿ" ಎಂಬುದಾಗಿ ಕರ್ಮದ ಮಹತ್ವವನ್ನು ಪ್ರತಿಪಾದಿಸಿದ್ದಾನೆ. ಆದ್ದರಿಂದ ಮನುಷ್ಯನು ಅತ್ಯವಶ್ಯವಾಗಿ ಕರ್ಮವನ್ನು ಮಾಡಲೇಬೇಕು.

## ಕಾಯಕವು ಹೇಗಿರಬೇಕು ?

ಕಾಯಕವು ತ್ರಿಕರಣ ಶುದ್ಧವಾದದ್ದೂ, ಸದಾಚಾರನಿರತವಾದದ್ದೂ, ಪರೋಪಕಾರಯುಕ್ತವಾದದ್ದೂ ಇರಬೇಕು. ಈ ವಿಷಯಕ್ಕೆ ಗೀತೆಯಲ್ಲಿ "ಕರ್ಮಣ್ಯೇವ ಸಂಸಿದ್ಧಿಮಾಸ್ಥಿತಾಃ ಜನಕಾದಯಃ" ಎಂಬುದಾಗಿ ಹೇಳಿರುವದು. ವೈರಾಗ್ಯಶಿರೋಮಣಿ ಶಿವಶರಣೆ ಅಕ್ಕಮಹಾದೇವಿಯು ಕರ್ತವ್ಯವು ತ್ರಿಕರಣ ಶುದ್ಧವಾಗಿರಬೇಕು ಎಂಬುವದನ್ನು ಕೆಳಗಿನಂತೆ ಹೇಳಿದ್ದಾಳೆ.

ವಚನಃ—ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯಾ ನೀನು. ಮನಕರಗದವರಲ್ಲಿ ಪುಷ್ಪವನೊಲ್ಲೆಯಯ್ಯಾ ನೀನು. ಹದುಳಿಗರಿಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯಾ ನೀನು. ಅರಿವು ಕಣ್ದೆರೆಯದವರಲ್ಲಿ ಆರತಿಯನೊಲ್ಲೆಯಯ್ಯಾ ನೀನು. ಭಾವಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯಾ ನೀನು. ಹೃದಯ ಕಮಳವರಳದವರಲ್ಲಿ ಇರಲೊಲ್ಲೆಯಯ್ಯಾ ನೀನು. ಎನ್ನಲ್ಲಿ ನೀನುಂಟೆಂದು ಕರಸ್ಥಲವ ನಿಂಬುಗೊಂಡೆ ಹೇಳಾ ಚನ್ನಮಲ್ಲಿಕಾರ್ಜುನಾ.

ಎಂದು ಅತಿ ವಿರಳವಾಗಿ ಸರ್ವರಿಗೂ ತಿಳಿಯುವಂತೆ ಹೇಳಿದ್ದಾಳೆ. ಇದಲ್ಲದೆ ಕಾಯಕವು ಪರೋಪಕಾರ ನಿರತವಾಗಿರಬೇಕು, ಎಂಬುವ ಬಗ್ಗೆ ಗೀತೆಯಲ್ಲಿ ಹೇಳಿರುವದೇನೆಂದರೆ —

"ಯಜ್ಞಶಿಷ್ಟಾಶಿನಃ ಸಂತೊ । ಮುಚ್ಯಂತೇ ಸರ್ವಕಿಲ್ಬಿಷೈಃ ಭುಂಜಂತೆ ತೇತ್ವಘಂಪಾಪಾ । ಯೆಪಚ್ಯಂತ್ಯಾತ್ಮಕಾರಣಾತ್" ಎಂದರೆ ಪ್ರತಿಯೊಂದು ಕಾಯಕವು ಪರಹಿತನಿರತವಾಗದಿದ್ದರೆ ಪಾಪವನ್ನುಂಟುಮಾಡುತ್ತದೆ. ಆದ್ದರಿಂದ ಕಾಯಕವು ಪರೋಪಕಾರನಿಷ್ಠವಾಗಿರಬೇಕು.

## ಕಾಯಕದಲ್ಲಿಯ ನಿಷ್ಠತೆಯು.

ಸಮಸ್ತ ಸೃಷ್ಟಿಗೆ ಕಾಯಕವೇ ಮೂಲ ಆಧಾರವೆಂದು ಖಂಡಿತ ವಾಗಿ ಹೇಳಬಹುದು. ಕರ್ಮವಿಲ್ಲದೆ ಯಾವ ಪ್ರಾಣಿಯೂ ಬದುಕಲಾರದು, ಯಾವ ಸೃಷ್ಟಿಯೂ ಆಗಲಾರದು. ಸ್ವಾಭಾವಿಕವಾಗಿ ಸಿದ್ಧವಾಗಿದ್ದ ಆಹಾರಸಾಮಗ್ರಿಗಳನ್ನು ವ್ಯಾಘ್ರಾದಿಗಳು ಹುಡುಕದೇ ಕುಳಿತಲ್ಲಿ ಕುಳಿತರೆ ಸಿಗುವದೇ? ಎಂದೂ ಸಿಗಲಾರದು. ಸರ್ವಕ್ಕೂ ಕರ್ಮಕಾರಣವೆಂಬುದನ್ನು ಗೀತೆಯು ಹೇಳುತ್ತದೆ.

"ಅನ್ನಾದ್ಭವತಿ ಭೂತಾನಿ । ಪರ್ಜನ್ಯಾದನ್ನಸಂಭವಃ ॥
ಯಜ್ಞಾದ್ಭವತಿಪರ್ಜನ್ಯೋ । ಯಜ್ಞಕರ್ಮ ಸಮುದ್ಭವಃ ॥

ಅಂದಮೇಲೆ ಸಕಲಕ್ಕೂ ಕಾರಣವಾದ ಕರ್ತವ್ಯದಲ್ಲಿ ದೃಢವಾದ ನಿಷ್ಠೆಯಿಂದ ಎಷ್ಟು ವಿಘ್ನ ಬಂದರೂ ಎದುರಿಸುತ್ತ ಮಾಡಲೇಬೇಕೆಂಬುದಾಗಿ ಶರಣರು ಹೇಳುತ್ತಾರೆ. ಬಸವೇಶ್ವರರು— "ಕಾಯದ ಕಳವಳಕ್ಕಂಜಿ ಈಯಯ್ಯಾ ಎನ್ನೆನು. ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು. ಯದ್ಭಾವಂ ತದ್ಭವತಿ, ಉರಿಬರಲಿ, ಸಿರಿಬರಲಿ, ಬೇಕು ಬೆಡೆನ್ನನಯ್ಯಾ. ಆನು ನಿಮ್ಮ ಹಾರೆನು. ಮಾನವರ ಬೇಡೆನು. ಆಣೆ ನಿಮ್ಮಾಣೆಯಯ್ಯಾ. ಕೂಡಲಸಂಗಮದೇವ ಕಾಯಕವೇ ಕೈಲಾಸವು"

ಅಕ್ಕನೂ ಕೂಡಾ ಹೇಳಿರುವದೇನೆಂದರೆ— "ಕಿಡಿಕಿಡಿ ಕೆದರಿದರೆ ಎನಗೆ ಹಸಿವು ತೃಷೆಯಡಗಿತೆಂಬೆನಯ್ಯಾ. ಮುಗಿಲು ಹರಿದು ಬಿದ್ದರೆ ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದರೆ ಎನ್ನಗೆ ಪುಷ್ಪ ವೆಂಬೆನು. ಚನ್ನಮಲ್ಲಿಕಾರ್ಜುನಾ ಶಿರಹರಿದುಬಿದ್ದರೆ, ಎನ್ನ ಪ್ರಾಣ ನಿನಗರ್ಪಿಸುವೆನು."

ಎಂದು ಕರ್ತವ್ಯನಿಷ್ಠತೆಯಿಂದ ಹೇಳಿದ್ದಾಳೆ. ಅಂದಮೇಲೆ ಎಂಥ ಕಠಿಣ ಪ್ರಸಂಗಬಂದರೂ ಕರ್ತವ್ಯವನ್ನು ಬಿಡಬಾರದು.

## ಕಾಯಕವೂ ಶರಣರೂ.

೮೦೦ ವರ್ಷಗಳ ಕೆಳಗೆ ಕಲ್ಯಾಣಪಟ್ಟಣದಲ್ಲಿ ಶರಣರು ಅನುಭವ ಮಂಟಪವನ್ನು ಸ್ಥಾಪಿಸಿ ಅನೇಕ ಮಹತ್ವದ ವಿಷಯಗಳ ಚರ್ಚೆಮಾಡಿದರು. ಅವುಗಳಲ್ಲಿ "ನುಡಿದಂತೆ ನಡೆ, ಇದೇ ಜನ್ಮ ಕಡೆ" ಎಂಬುವದನ್ನು ಆಚರಣೆಯಲ್ಲಿ ತಂದು ಒಂದು ಕ್ರಾಂತಿಯನ್ನೇ ಹೂಡಿದರು. ಅವರಲ್ಲಿ ಶ್ರೀಬಸವಣ್ಣನವರೇ ಅಗ್ರೇಸರರು. ಇವರ ಪ್ರಭಾವವು ಹಿಂದುಸ್ತಾನದಲ್ಲಿ ಕಾಶ್ಮೀರದಿಂದ ರಾಮೇಶ್ವರದ ವರೆಗೆ ಹಬ್ಬಿ ಕೆಲವು ರಾಜರೂ ಕೂಡಾ ಇವರಲ್ಲಿ ಕೂಡಿಕೊಂಡು ಕಾಯಕದ ಮಹತ್ವವನ್ನು ಪಸರಿಸಿದರು. ಮೋಳಿಗೆಯ ಮಾರಯ್ಯ, ಮಡಿವಾಳಮಾಚರಸ, ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ನುಲಿಯ ಚಂದಯ್ಯ, ಹಡಪದಪ್ಪಣ್ಣ ಮೊದಲಾದ ಅಸಂಖ್ಯಾತ ಶರಣರು ಇದ್ದರು. ಅವರವರ ಹೆಸರುಗಳಿಂದಲೇ ಕಾಯಕಗಳು ಗೋಚರವಾಗುತ್ತವೆ. ಶರಣರು ಕಾಯಕದಲ್ಲಿ ನಿಷ್ಠೆಯನ್ನಿಟ್ಟು ಆಚಾರವಿಚಾರಗಳ ಕಡೆಗೆ ಲಕ್ಷ್ಯಕೊಡುತ್ತಿದ್ದರಲ್ಲದೆ ಅವರಲ್ಲಿ ಜಾತಿವಾದಕ್ಕೆ ಆಸ್ಪದವಿದ್ದಿಲ್ಲವೆಂಬುವದು ಬಸವಣ್ಣನವರ ವಚನದಿಂದಲೇ ತಿಳಿಯುವದು.

"ದೇವಸಹಿತ ಭಕ್ತಮನೆಗೆ ಬಂದೊಡೆ ಕಾಯಕವಾವುದೆಂದು ಬೆಸಗೊಂಡೆನಾದೊಡೆ, ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ ತಲೆದಂಡ, ತಲೆದಂಡ. ಕೂಡಲಸಂಗಮದೇವಾ, ಭಕ್ತರಲ್ಲಿ ಕುಲವನರಸುವಡೆ ನಿಮ್ಮ ರಾಣಿವಾಸದಾಣೆ"

ಸ್ತ್ರೀಯರಿಗೂ ಕೂಡಾ ಸರ್ವ ವಿಧದಿಂದ ಪುರುಷರಂತೆ ಸಮಾನವಾದ ಅಧಿಕಾರವು ಕಾಯಕದಲ್ಲಿ ಇದ್ದಿತು. ಆದ್ದರಿಂದಲೇ ಅನೇಕ ಶಿವಶರಣೆಯರೂ ಕೂಡಾ ಆಗಿಹೋದರು.

## ಕಾಯಕವೂ ದೇಶೋದ್ಧಾರವೂ.

ಕಾಯಕಕ್ಕೂ ದೇಶೋದ್ಧಾರಕ್ಕೂ ಅತ್ಯಂತ ನಿಕಟಸಂಬಂಧವಿದೆ. ಇದಕ್ಕೆ ಸಕಲೈಶ್ವರ್ಯದಿಂದ ಕೂಡಿದ್ದ ಪೂರ್ವದ ಆರ್ಯಭೂಮಿಯೇ ದೃಷ್ಟಾಂತವು. ಮೊದಲಿನ ನಮ್ಮ ದೇಶದ ಸಂಪತ್ತನ್ನೂ ಕೈಗಾರಿಕೆಯ ಕಲೆಯ ಕುಶಲತೆಗಳನ್ನೂ ನೆನಿಸಿಕೊಂಡರೆ ದುಃಖವಾಗುತ್ತದೆ. ಆಗಿನ ನಮ್ಮ ಉನ್ನತಸ್ಥಿತಿಯನ್ನು ಎಷ್ಟೋ ಪರದೇಶದ ಪ್ರವಾಸಿಕರೂ ವಿದ್ವಾಂಸರೂ ಅನೇಕ ರೀತಿ ಹಾಡಿಹರಿಸಿದ್ದಾರೆ. ಅದಕ್ಕೆಲ್ಲ ನಮ್ಮ ಪೂರ್ವ

ಜರ ಕರ್ತವ್ಯನಿಷ್ಠತೆಯೇ ಕಾರಣ. ಆಗಿನ ಶಿಲ್ಪಕಲೆಗಳೂ ಕಟ್ಟಡಗಳೂ ಇಂದಿಗೂ ನೋಡುವವರ ಮನಸ್ಸನ್ನು ದಂಗುಬಡಿಸುತ್ತವೆ. ಆದ್ದರಿಂದಲೇ ನಮ್ಮ ಭಾರತವು ಅನ್ಯರ ಸಹಾಯವನ್ನು ಬೇಡದಲೇ ತನ್ನ ಸಾಮರ್ಥ್ಯದಿಂದ ಬಾಳಿ ಮೆರೆಯುತ್ತಿತ್ತು. ಬರಬರುತ್ತ ಪರರಾಷ್ಟ್ರಗಳ ಸಂಸರ್ಗದಿಂದಲೋ, ಅಥವಾ ಕಾಲಚಕ್ರದ ವೈಪರೀತ್ಯದಿಂದಲೋ, ನಮ್ಮ ಭಾರತದಲ್ಲಿ ಸೋಮಾರಿತನವು ಮನೆಮಾಡಿತು. ನಂತರ ಭಾರತೀಯರು ಸ್ವಾತಂತ್ರ್ಯತೆಯ ತಳಹದಿಯಾದ ಕಾಯಕಮಂತ್ರವನ್ನು ಮರೆತರು. ಹಾಗೆ ಮಾಡಿದ್ದರಿಂದಲೇ ನಾವು ಪರರ ದಾಸ್ಯತ್ವವನ್ನು ಸ್ವೀಕರಿಸಬೇಕಾಯಿತು. ನಮ್ಮ ದೇಶದ ಕಚ್ಚಾ ಮಾಲಿನಿಂದ ನಮ್ಮ ಒಡವೆಗಳನ್ನು ನಾವೇ ತಯಾರಮಾಡಿಕೊಂಡರೆ, ನಮ್ಮ ಸಂಪತ್ತು ನಮ್ಮಲ್ಲೇ ಉಳಿಯುವದು. ಆ ತತ್ವವನ್ನು ೮ ನೂರು ವರ್ಷಗಳ ಕೆಳಗೆ ಪ್ರಚಾರ ಮಾಡಿದ ಬಸವನು ಕೇವಲ ಮತೋದ್ಧಾರಕನಾಗದೆ ರಾಷ್ಟ್ರೋದ್ಧಾರಕನಾಗಿ ಭರತಖಂಡದಲ್ಲಿ ಅಗ್ರಗಣ್ಯನಾದನು. ಆದ್ದರಿಂದ ಕಾಯಕವು ದೇಶೋದ್ಧಾರಕ್ಕೆ ತಳಹದಿಯೆಂಬುದನ್ನು ಪ್ರತಿಯೊಬ್ಬನು ಲಕ್ಷದಲ್ಲಿಡಬೇಕು.

## ಕಾಯಕವೂ – ವೀರಶೈವರೂ.

ವೀರಶೈವರ ಪ್ರತಿಯೊಂದು ಧಾರ್ಮಿಕ ಕಾರ್ಯದಲ್ಲಿ ಕಾಯಕಗಳು ಒಂದು ವಿಶಿಷ್ಟ ತತ್ವವನ್ನು ಹೊಂದಿಕೊಂಡಿರುತ್ತವೆ. ನಮ್ಮ ಮತತತ್ವಗಳಾದ, ಅಷ್ಟಾವರಣ ಪಂಚಾಚಾರ, ಷಟ್‌ಸ್ಥಲಗಳು ಕಾಯಕಗಳನ್ನು ಬಿಟ್ಟು ಇಲ್ಲವೇ ಇಲ್ಲ. ಸ್ಥಲಸಂಕೋಚದಿಂದ ಒಂದೆರಡನ್ನು ತೋರಿಸುತ್ತೇನೆ. ಅಷ್ಟಾವರಣಗಳಲ್ಲಿ ಭಸ್ಮವು ಶಾಸ್ತ್ರದ ಪ್ರಕಾರ ಹೇಗೆ ತಯಾರಾಗಬೇಕು ಎಂಬುದನ್ನು ಹೇಳಿದೆ. ಶಿವಭಕ್ತರಾದ ನಾವುಗಳು ಅದನ್ನು ಮರೆತು ಸ್ಮಶಾನದ ಬೂದಿಯನ್ನು ತಂದು ಅಶುದ್ಧವಾಗಿ ಮಾಡಿ ಭವಿಜನರು ಅಭಕ್ಷ್ಯಪದಾರ್ಥಗಳ ಮಧ್ಯದಲ್ಲಿರುವ ಬಾಜಾರದಲ್ಲಿ ಮಾರುವದನ್ನು ತಂದು ಧರಿಸುತ್ತೇವೆ. ಅಂದಮೇಲೆ ಅಷ್ಟಾವರಣಗಳಲ್ಲಿ ಎಷ್ಟು ನಿಷ್ಠೆ ಇರುವದೆಂಬದು ಕಂಡುಬರುತ್ತದೆ. ಇದರಂತೆ ಉಳಿದವುಗಳ ಪರಿಸ್ಥಿತಿಯು. ಆದರೆ ನಾವು ಹಾಗೆ ಮಾಡದೆ ಶರಣತತ್ವದಂತೆ ಶಾಸ್ತ್ರ ಪದ್ಧತಿಯಂತೆ ನಮ್ಮ ಕಾರ್ಯಗಳನ್ನು ನಾವೇ ಮಾಡಿಕೊಳ್ಳಬೇಕು.

## ಕಾಯಕವೂ, ಮನಸ್ಸೂ.

ಮಾನವನು ಕರ್ಮನಿರತನಾದರೆ ಸಶಕ್ತನೂ ಧೈರ್ಯಶಾಲಿಯೂ, ಚತುರನೂ ಆಗುವನಲ್ಲದೆ ಸ್ಥಿರಚಿತ್ತನಾಗುವನು. ಸ್ಥಿರ ಚಿತ್ತತೆಗೆ ಕಾಯಕವೇ ಮೂಲವೆಂದು ಗೀತೆಯು ಬೋಧಿಸುತ್ತದೆ.

" ಕಾಯೇನಮನಸಾಬುದ್ಧ್ಯಾ ಕೇವಲೈರಿಂದ್ರಿಯೈರಪಿ । ಯೋಜನಃ ಕರ್ಮಕುರ್ವಂತಿ । ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥ "

ಆದ್ದರಿಂದ ಚಿತ್ತಶುದ್ಧಿಗಾಗಿ ಕಾಯಕ ಮಾಡಬೇಕು. ಇದೇ ತತ್ವವನ್ನು ತಿಳಿದು ಯಾವತ್ತರೂ ಕಾಯಕವೇ ಕೈಲಾಸ, ದೇಶ ಸೇವೆಯೇ ಈಶ ಸೇವೆ, ಜನತೆಯ ಸೇವೆಯೇ ಜನಾರ್ದನ ಸೇವೆ, ಎಂಬುದನ್ನು ಸ್ಮರಿಸುತ್ತಾ ಮಹಾತ್ಮರ ಆಚರಣೆಗಳನ್ನು ಆಚರಿಸುತ್ತ ತಮ್ಮ ಐಶ್ವರ್ಯವನ್ನು ಸೂರಿಮಾಡುತ್ತ ಸುಖೋಪಭೋಗಗಳನ್ನು ತ್ಯಜಿಸುತ್ತ ಅನೇಕ ಕಷ್ಟಗಳನ್ನನುಭವಿಸುತ್ತ ಕಿಂಕರತ್ವವನ್ನು ವಹಿಸುತ್ತ ಸರ್ವಕಾರ್ಯಗಳನ್ನು ಕೈಮುಟ್ಟಿ ಮಾಡುತ್ತ ದೇಶೋದ್ಧಾರಕ್ಕಾಗಿ ತನುಮನಧನಗಳನ್ನು ಸವಿಸುತ್ತ ಅಹಿಂಸಾ ತತ್ವವನ್ನು ಬೋಧಿಸುತ್ತ ಜಾತಿವಾದವನ್ನು ದೂಡುತ್ತ ಸಮತಾವಾದವನ್ನು ಬೀರುತ್ತ ಸ್ವಾತಂತ್ರ್ಯ ಮಂತ್ರವನ್ನು ಜಪಿಸುತ್ತ, ಉಜ್ವಲಪ್ರಭೆಯನ್ನು ಬೆಳಗುತ್ತ ಸರ್ವ ಭಾರತವಾಸಿಗಳೆಲ್ಲರಿಗೂ ಕಾಯಕವೇ ಕೈಲಾಸವೆಂಬುವದನ್ನು ನೆನೆಯುತ್ತ ಆಚರಿಸಿದಲ್ಲಿ ಸ್ವಲ್ಪೇ ದಿವಸಗಳಲ್ಲಿ ನಮ್ಮ ಪೂರ್ವದ ವೈಭವವನ್ನು ನಾವು ಕಾಣುತ್ತೇವೆ. ಮತ್ತು ಕರ್ಮಪ್ರಿಯನಾದ ಪರಮೇಶ್ವರನ ಮನ್ನಣೆಗೆ ಪಾತ್ರರಾಗುತ್ತೇವೆ.

### ರಾ॥ ಬ॥ ಹಳಕಟ್ಟಿಯವರಿಗೆ ನನ್ನ ಕಾಣಿಕೆ.

" ಯುಕ್ತಿವಂತನೇ । ಭಕ್ತಿಲೋಲನೇ ॥
ಶಿವತತ್ವವೃದ್ಧಿ । ಭವಜೀವಶುದ್ಧಿ । ಶಿವಾನುಭವ ಸಿದ್ಧ ॥೧॥
ಕಾಯ ಕನ್ನಡ ಸೇವೆಯ । ತನು ಮನ ಧನದಿ । ಖಿನ್ನನಾಗದೆಗೈದ ॥೨॥
ವಚನಸಾರ ಸಾಹಿತಿ । ವಾಚಕ ಜನಕೆ । ತೋಚಿದ ಮಹಿಮ ॥೩॥
ರಾಜಕಾರ್ಯದೊಳ್ । ಸೀ ಬುದ್ಧಿಯ ತೋರಿ । ರಾವಬಹಾದ್ದೂರ ನೀ ॥೪॥
ವಿಜಯಪುರವಾಸನೆ । ವಚನ ಸಮ್ರಾಟನೆ । ಕನ್ನಡ ಸಿರಿವಂತ" ॥೫॥

---

# ವ ಚ ನ.

(ಬರೆದವರು — ಮ. ಶಾಂತದೇವ ಶಿ. ಮಂದಿರ. ಇಲಕಲ್ಲ)

೧

ಇಂದಿನ ಜನವತಿ । ಆದರದಿಂದಲಿ
ಶೋಧಿಸಿ ವಚನವ ಪರಿಪರಿಯಿಂ ।
ದಾದರಗೊಂಡೀ । ಸಾಧಕ ವರ್ಗಕೆ
ಮೋದದ ಮಾರ್ಗವ ತೋರಿಹುದು ॥

೨

ವಚನದಿ ಹೆಣೆದಿದೆ । ನೀತಿಯ ಮಾಲೆಯು
ವೇದದ ಮರ್ಮವು ಧರ್ಮದ ಮೇಣ್ ।
ಸತ್ಯದ ನುಡಿಯಿದೆ । ಶಾಂತಿಯ ಸೊಬಗಿದೆ
ಭಕುತಿಯ ರಸ ತಾನುಕ್ಕುತಿದೆ॥

೩

ಹೃದಯವುಕರಗಿದೆ । ಬೆಡಗಿದೆ ಕಾವ್ಯದ
ಆಚಾರದ ಕಣ ಕಾಣುತಲಿದೆ ।
ಕರುಣೆಯು ತುಂಬಿದೆ । ಕಿಂಕರ ಭಾವವು
ತುಳುಕಿದೆ ಅನುಭವ ಸುಧೆಯಿಂದ ॥೩॥

# ನಾದ-ಬಿಂದು-ಕಲೆಗಳು.

( ಲೇಖಕ:— ಶ್ರೀಯುತ ಬಸವಪ್ಪ ಚೆನ್ನಪ್ಪ ಪಟ್ಟೇದ ವಂಟಮುರಿ )

ಮಹಾಲಿಂಗವು ಸಕಲ ಲಿಂಗಗಳ ಆದಿ ಸ್ವರೂಪವು. ಅದಕ್ಕಿಂತ ಹಿಂದೆ ಹೋದರೆ, ಮೊದಲು ನಿಷ್ಕಲಲಿಂಗ, ಬಳಿಕ ನಿಃಶೂನ್ಯಲಿಂಗ, ತರುವಾಯ ನಿರಂಜನ ಲಿಂಗವೆಂದು ವೀರಶೈವ ಶಾಸ್ತ್ರವು ಹೇಳುತ್ತದೆ. ಪರಾತ್ಪರವಾದ ನಿರಂಜನ ಲಿಂಗದಿಂದ ಮೊದಲು ನಾದವು ಉದ್ಭವಿಸಿತು. ಬಳಿಕ ಅದರಿಂದ ಬಿಂದುವು ಹುಟ್ಟಿತು. ಈ ನಾದ ಬಿಂದುಗಳೆರಡೂ ಕೂಡಿ ಕಲೆಯಾಯಿತು. ಹೀಗೆ ವಚನಶಾಸ್ತ್ರದಲ್ಲಿದೆ. ಹೀಗೆಂದರೇನೆಂಬುದನ್ನು ಇಲ್ಲಿ ಆಲೋಚಿಸುವಾ. ಆ ಪರಾತ್ಪರ ಲಿಂಗವು ಅನಂತ ಕಾಲದ ವರೆಗೆ ತನ್ನಲ್ಲಿ ತಾನೇ ಸ್ವಸ್ಥವಾಗಿದ್ದು, ಮುಂದೆ ಅದರಲ್ಲಿ ಹೀಗೆ ಸ್ವಸ್ಥವಾಗಿರದೆ ಏನಾದರೂ ಲೀಲೆಮಾಡಬೇಕೆಂಬ ಕಲ್ಪನೆ ನಾಂಟಿತು. ಈ ಕಲ್ಪನೆ (ಸಂಕಲ್ಪನೆ)ಯೇ ನಾದವೆಂದು ಕರೆಯಲ್ಪಟ್ಟಿತು. ಈ ನಾದೋತ್ಪತ್ತಿಯ ಪೂರ್ವದ ಪರಾತ್ಪರ ಲಿಂಗವೇ ನಿರಂಜನ (ಯಾವತರದ ರಂಜನೆಯೂ ಇಲ್ಲದ) ಲಿಂಗ. ನಾದದಿಂದೊಡಗೂಡಿದ ಅದರ ಸ್ವರೂಪವೇ ನಿಃಶೂನ್ಯಲಿಂಗ. ಇದರಲ್ಲಿಯೂ ಈಗ ನಾವು ಸೃಷ್ಟಿಯಲ್ಲಿ ಕಾಣುವ ವಿಧವಿಧದ ಯಾವ ವಸ್ತುಗಳೂ ಇರಲಿಲ್ಲವೆಂದೇ ಇದಕ್ಕೆ ಈ ಹೆಸರು ಬಂದಿರುವುದು. ಬಿಂದುವಿನಿಂದೊಡಗೂಡಿದ ನಿಃಶೂನ್ಯಲಿಂಗದ ಸ್ವರೂಪವೇ ನಿಷ್ಕಲಲಿಂಗ. ಇದರಲ್ಲಿ ಕಲೆಯು ಸಮಾವೇಶವಿಲ್ಲ. ಅಂತೇ ಅದು ನಿಷ್ಕಲಲಿಂಗವೆನಿಸಿತು. ನಾದ ಬಿಂದು ಕಲೆ ಈ ಮೂರರಿಂದ ಸಹಿತವಾದ ಲಿಂಗವೇ ಸಕಲ ಲಿಂಗವಾಯಿತು. ಇದು ನಿಷ್ಕಲಲಿಂಗದಲ್ಲಿ ಕಲೆ ಬೆರೆದುದರ ಪರಿಣಾಮವು, ಅದೇ ಮಹಾಲಿಂಗ. ಇದರಲ್ಲಿ ಕಲೆಯ ವರೆಗೆ ಎಲ್ಲವೂ ಕೂಡಿಕೊಂಡಿವೆ. ಇದೇ ದೃಷ್ಟಿಯಿಂದ ವಿಚಾರಿಸಿದರೆ, ನಿಷ್ಕಲಲಿಂಗವನ್ನು ಸಬಿಂದು ಲಿಂಗವೆಂದೂ, ನಿಃಶೂನ್ಯಲಿಂಗವನ್ನು ಸನಾದಲಿಂಗವೆಂದೂ ಪರಾತ್ಪರ ಲಿಂಗವಾದ ನಿರಂಜನವನ್ನು ನಿರ್ನಾದಲಿಂಗವೆಂದೂ ಕರೆಯಬಹುದು. ಮಹಾಲಿಂಗದ ತರುವಾಯದ ಸಕಲಲಿಂಗಗಳು— ಪ್ರಸಾದಲಿಂಗ, ಚರಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗಗಳು— ಬರುಬರುತ್ತ ಹೆಚ್ಚೆಚ್ಚು ಸ್ಥೂಲವಾಗಿ ಕ್ರಮದಿಂದ ಒಂದರಿಂದೊಂದು ಉದ್ಭವಿಸಿದುವು.

ನಿರಂಜನ ಲಿಂಗದಲ್ಲಿ ನಾದವು ಹುಟ್ಟಿದ ಮಾತ್ರಕ್ಕೆ ಬರೀ ಅಷ್ಟ ರಿಂದಲೇ ಲೀಲೆ ಸಂಭವಿಸಲಾರದು. ಬರಿಗೈಯಿಂದ ಹೇಗೆ ಮೊಳಹಾಕ ಲಿಕ್ಕೆ ಬರುವುದಿಲ್ಲವೋ ಹಾಗೆಯೇ ಬಿಂದುವಿಲ್ಲದೆ [೧] ಮುಂದಿನ ಕಾರ್ಯವೇ ನಡೆಯಲಾರದು. ಈ ಬಿಂದುವೇ ಎಲ್ಲ ಕಲೆಗಳ ಹಾಗು ಸೃಷ್ಟಿಯ ಉತ್ಪತ್ತಿಗೆ ಕಾರಣವಾಗುವುದು. ಈ ನಾದ ಬಿಂದು ಕಲೆಗಳೇ (ರೂಪ-ಶಕ್ತಿ ಗಳೇ) ಮುಂದೆ ಪರಮಾತ್ಮನ ಲೀಲೆಗೆ (ಸೃಷ್ಟಿಯ ಉತ್ಪತ್ತಿಗೆ) ಕಾರಣ ವಾದವು. ಇವಕ್ಕೇ ಸತ್ತು (ಬಿಂದು), ಚಿತ್ತು (ಮೂಲಜ್ಞಾನವೆಂಬ ನಾದ), ಆನಂದ (ಕಲೆ) ಎಂತಲೂ ಹೆಸರಗಳು.

ಇನ್ನು ಇಲ್ಲಿ (ನಿಷ್ಕಲಾದಿ ತ್ರಿಲಿಂಗಗಳಲ್ಲಿ) ಗುರು ಲಿಂಗ ಜಂಗಮ ಗಳದೆಂತು ಸಂಬಂಧಿಸುವುವೆಂಬದನ್ನು ನೋಡೋಣ. ಇದಕ್ಕೂ ಮೊದಲು ಕಾಯ ಗುರು, ಪ್ರಾಣ ಲಿಂಗ, ಸುಜ್ಞಾನ ಜಂಗಮವೆಂಬುದನ್ನು ಪೂರ್ಣ ಲಕ್ಷ್ಯದಲ್ಲಿಟ್ಟುಕೊಂಡಿರಬೇಕು. ಕಾಯವು ಸ್ಥೂಲವಾದುದೂ, ಪ್ರಾಣವು ಸೂಕ್ಷ್ಮವಾದುದೂ, ಸುಜ್ಞಾನವು ಅವೆರಡಕ್ಕೂ ಕಾರಣವಾದ ಪರಾತ್ಪರ ವಸ್ತುರೂಪವಾದುದೂ ಎಂಬುದನ್ನು ಮರೆಯಕೂಡದು.

ನಿಷ್ಕಲಲಿಂಗದಲ್ಲಿ— ಕಲೆಯು ಮೂಲತಃ ಇಲ್ಲವೇ ಇಲ್ಲ. ಅದ ರಲ್ಲಿ ಬಿಂದುವೇ ಹೆಚ್ಚು ಸ್ಥೂಲವಾದುದು. ಆದುದರಿಂದ ಅದೇ ಗುರು. ಅದಕ್ಕಿಂತ ನಾದವು ಹೆಚ್ಚು ಸೂಕ್ಷ್ಮವಾದುದರಿಂದ ಅದು ಲಿಂಗ. ಇವೆ ರಡಕ್ಕೂ ಕಾರಣವಾದ ಪರವಸ್ತುವೇ ಜಂಗಮ.

ನಿಃಶೂನ್ಯಲಿಂಗದಲ್ಲಿ— ಇದರೊಳಗೆ ಬರೇ ನಾದಮಾತ್ರವಿರುವುದು. ಆದಕಾರಣ ಅದೇ ಸ್ಥೂಲ. ಅದರಿಂದ ಅದೇ ಗುರು. ಪರವಸ್ತುವಿಗೆ

---

[೧] ಭೂಮಿತಿ ಶಾಸ್ತ್ರದಲ್ಲಿ "ಬಿಂದುವಿಗೆ ಸ್ಥಿತಿ ಮಾತ್ರವಿದ್ದು ಪರಿಮಾಣ (ಉದ್ದ, ಅಗಲ, ದಿಂಡ)ಗಳೇನೂ ಇರುವದಿಲ್ಲ" ಎಂದು ನಿರ್ದಿಷ್ಟವಾಗಿದೆ. ಈ ಬಿಂದುವು ಚಲಿಸಿದರೆ ರೇಖೆಯೂ, ರೇಖೆ ಚಲಿಸಿದರೆ ಕ್ಷೇತ್ರವೂ, ಹುಟ್ಟುವುವು. ಈ ರೇಖೆ ಕ್ಷೇತ್ರಗಳೇ ಕಲೆಗಳು. ಕ್ಷೇತ್ರವು ಚಲಿಸಿದರೆ ಘನವಾಗುವುದು. ಅದು ಮಾತ್ರ ಸ್ಥೂಲ ರೂಪವನ್ನು ತಾಳುವುದು; ಹಾಗು ವಸ್ತುವೆನಿಸುವುದು. ತತ್ತ್ವ ಶಾಸ್ತ್ರದೊಳಗಿನ ಬಿಂದು ಕಲೆಗಳ ಸ್ವರೂಪವನ್ನು ಈ ದೃಷ್ಟಾಂತದಿಂದ ಸುಲಭ ವಾಗಿ ಅರಿಯಬಹುದು.

ವಾಹನವಾಗಿರ್ದ ಮೂಲ ಜ್ಞಾನವೇ ಲಿಂಗ. (ಯಾಕೆಂದರೆ "ಪ್ರಜ್ಞಾನಂ ಬ್ರಹ್ಮ" ಎಂದು ಶ್ರುತಿ ಇರುವುದು.) ಪರವಸ್ತುವೇ ಜಂಗಮ.

ನಿರಂಜನಲಿಂಗದಲ್ಲಿ— ಪರವಸ್ತುವನ್ನು ವಹಿಸಿದ ಮೂಲಕ ಮಹಾ ಜ್ಞಾನವೇ ಗುರು. ನಿರಂಜನ ಸ್ವರೂಪವೇ ಲಿಂಗ. ಪರವಸ್ತುವೇ ಜಂಗಮ.

ಈ ವಿಷಯದಲ್ಲಿ ಮುಂದಿನ ವಚನವೇ ನಿದರ್ಶನವಾಗಿದೆ:—

"ಅಯ್ಯಾ ನೀನು ನಿರಾಕಾರವಾಗಿದ್ದಲ್ಲಿ ನಾನು ಜ್ಞಾನವೆಂಬ ವಾಹನವಾಗಿರ್ದೆ ಕಾಣಾ. ಅಯ್ಯಾ ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನವಾಗಿರ್ದೆ ಕಾಣಾ. ಅಯ್ಯಾ ನೀನು ಆಕಾರವಾಗಿರ್ದಲ್ಲಿ ನಾನು ವೃಷಭವೆಂಬ ವಾಹನವಾಗಿರ್ದೆ ಕಾಣಾ. ಅಯ್ಯಾ ನೀನು ಎನ್ನ ಭವವ ಕೊಂದಿಹೆನೆಂದು ಜಂಗಮವಾಗಿ ಬಂದರೆ ನಾನು ಭಕ್ತನೆಂಬ ವಾಹನವಾಗಿರ್ದೆ ಕಾಣಾ ಕೂಡಲಸಂಗಮದೇವಾ."

ಈ ಗುರು ಲಿಂಗ ಜಂಗಮಗಳು ಕೇವಲ ತೋರಿಕೆಯಲ್ಲಿ ಮಾತ್ರ ಉಂಟು. ಅವೆಲ್ಲ ಒಂದೇ ಪರವಸ್ತುವಿನ ಬೇರೆ ಬೇರೆ ರೂಪಗಳು. "ಏಕ ಏವ ಶಿವಃ ಸಾಕ್ಷಾತ್ ಸರ್ವಾನುಗ್ರಾಹಕಃ ಪ್ರಭುಃ। ಗುರು ಜಂಗಮ ಲಿಂಗಾತ್ಮಾ, ವರ್ತತೇ ಭುಕ್ತಿ ಮುಕ್ತಿದಃ। ಎಂದು ಹೇಳಿದೆ. ಇವಕ್ಕೆಲ್ಲ ಅನಾದಿ ಶರಣನೇ (ಮೂಲ ಮಹಾಜ್ಞಾನವೇ) ಆಶ್ರಯವಾಗಿರುತ್ತಾನೆ.

---

# ಮಹಾ ಪುರುಷರ ಆಚರಣೆ.

(ಲೇಖಕ:— ರಾ॥ ಬ॥ ಪ. ಜಿ. ಹಳಕಟ್ಟಿ.)

ಪೃಥ್ವಿಯ ಇತಿಹಾಸದಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿದ ವರನೇಕರಿದ್ದಾರೆ. ಧಾರ್ಮಿಕ ಕ್ಷೇತ್ರದಲ್ಲಿ ಅತ್ಯುಚ್ಚ ಸ್ಥಾನವನ್ನು ಅವರು ಪಡೆದಿದ್ದಾರೆ. ಸಾಮಾಜಿಕ ರಂಗದಲ್ಲಿ ಕ್ರಾಂತಿಯನ್ನುಂಟುಮಾಡಿದ್ದಾರೆ. ರಾಜಕೀಯ ರಂಗದಲ್ಲಿ ಅವರು ಅನೇಕ ಸಾಹಸ ಕೃತ್ಯಗಳನ್ನು ಮಾಡಿ ನಾಡಿನ ಪರಿಸ್ಥಿತಿಯಲ್ಲಿ ಬದಲಾವಣೆಯನ್ನು ಮಾಡಿದ್ದಾರೆ. ಇಂಥ ಮಹಾ ಪುರುಷರಲ್ಲಿ ಇತರರಲ್ಲಿರದ ಆವುದೋ ಒಂದು ಅಲೌಕಿಕ ಗುಣವಿರುತ್ತ ದೆಂದು ಅನೇಕರು ವಾಡಿಕೆಯಾಗಿ ತಿಳಿಯುವದುಂಟು. ಆದರೆ ಪ್ರಖ್ಯಾತಿ ಹೊಂದಿದ ಮಹಾ ಪುರುಷರ ಜೀವನ ಚರಿತ್ರೆಯನ್ನು ನಾವು ನಿರೀಕ್ಷಿಸಿ ದಲ್ಲಿ ಇಂಥ ಅದ್ಭುತ ಗುಣವು ಅವರಲ್ಲಿರುವದು ಕಂಡುಬರುವದಿಲ್ಲ. ಅವರು ಎಲ್ಲರಂತೆಯೇ ಇರುತ್ತಾರೆ ಮತ್ತು ವರ್ತಿಸುತ್ತಾರೆ. ಆದರೆ ಅವರ ವರ್ತನೆಯಲ್ಲಿ ಒಂದು ವೈಶಿಷ್ಟ್ಯವಿರುತ್ತದೆ. ಅವರು ಶ್ರೇಷ್ಠ ಮತ್ತು ಅತ್ಯುಚ್ಚ ಗುರಿಯನ್ನಿಟ್ಟು ಕೊಂಡು ಅದಕ್ಕೋಸ್ಕರ ಅವರು ನಿರಂತರ ಶ್ರಮಬಡುವದೇ ಅವರ ಈ ವೈಶಿಷ್ಟ್ಯವು. ಈ ಗುಣದಿಂದಲೇ ಅವರು ಉನ್ನತ ಪುರುಷರಾಗಿರುತ್ತಾರೆ. ಇದೇ ಅವರನ್ನು ಉಚ್ಚ ಸ್ಥಿತಿಗೆ ತಂದಿ ರುತ್ತದೆ.

ಇವರಲ್ಲಿ ಕೆಲವರು ಉಚ್ಚ ಶಿಕ್ಷಣವನ್ನು ಹೊಂದಿದವರಿರಬ ಹುದು. ಬೇರೆ ಕೆಲವರು ಅಶಿಕ್ಷಿತರಿರಬಹುದು. ಕೆಲವರು ಸುಸಂಸ್ಕೃತರಿರಬ ಹುದು. ಕೆಲವರು ಅತ್ಯಂತ ಕರ್ಕಶ ವರ್ತನೆಯುಳ್ಳವರು ಇರಬಹುದು. ಅವರಲ್ಲಿ ಕೆಲವರು ಪ್ರೇಮಳ ಮನಸ್ಸಿನವರಿರಬಹುದು. ಬೇರೆ ಕೆಲವರು ಕಠೋರ ಮನಸ್ಸಿನವರಿರಬಹುದು. ಕೆಲವರು ಎಲ್ಲರ ಕೂಡ ಸ್ನೇಹ ಭಾವದಿಂದ ವರ್ತಿಸುತ್ತಿರಬಹುದು. ಬೇರೆ ಕೆಲವರು ಇತರರನ್ನು ದುರ್ಲಕ್ಷಿಸುತ್ತ ಅತ್ಯಂತ ಅಹಂಕಾರಿಗಳೂ ಇರಬಹುದು. ಆದರೆ ಇವ ರೆಲ್ಲರೂ ಕೆಲವೊಂದು ಉಚ್ಚ ಕಾರ್ಯವನ್ನು ಕೈಕೊಂಡವರಿರುತ್ತಾರೆ. ಆ ಕಾರ್ಯದಿಂದ ಅವರು ಎಂದೂ ಚ್ಯುತರಾಗುವದಿಲ್ಲ. ಅದನ್ನು ಬಿಟ್ಟು ಅವರು ಅತ್ತಿತ್ತ ಚಲಿಸುವದಿಲ್ಲ. ಮಹಾ ಪುರುಷರು ಜನರು

ಹೇಳಿದತ್ತ ಹೋಗುವವರಲ್ಲ. ಅವರು ಚಂಚಲವೃತ್ತಿಯುಳ್ಳವರಲ್ಲ ಅವರು ಯಾವಾಗಲೂ ನಿರ್ಧಾರ ವೃತ್ತಿಯುಳ್ಳವರಿರುತ್ತಾರೆ. ಈ ವೃತ್ತಿಯ ಮೂಲಕ ಅವರು ಮುಂದುವರಿಯುತ್ತಾರೆ.

ಆದುದರಿಂದ ಮಹಾಪುರುಷನಾಗಬೇಕೆನ್ನುವವನು ಕೆಲವೊಂದು ಉನ್ನತ ಕಾರ್ಯವನ್ನು ಕೊನೆಗಾಣಿಸಬೇಕೆಂಬ ದೃಢನಿಶ್ಚಯುವುಳ್ಳವನಾಗಿ ರಬೇಕು. ಅವನು ಅದಕ್ಕೋಸ್ಕರ ಕಷ್ಟ ಸಹಿಸಲು ಯಾವಾಗಲೂ ಸಿದ್ಧನಾ ಗಿರಬೇಕು. ಅದರ ಸಾಧನೆಗಾಗಿ ಅವನು ಕೆಲವೊಂದು ಮಾರ್ಗವನ್ನು ನಿರ್ಧರಿಸಿಕೊಳ್ಳಬೇಕು. ಆ ಮಾರ್ಗದಿಂದ ಅವನು ಗಮಿಸುವಾಗ ಅವನಿಗೆ ಅನೇಕ ಕಷ್ಟ ನಷ್ಟಗಳು ಉಂಟಾಗಬಹುದು. ಆದರೂ ತನ್ನ ಧ್ಯೇಯುಸಾಧನೆಯ ವಿಷಯವಾಗಿ ಅವನಲ್ಲಿ ಭರವಸೆ ಇರುವದರಿಂದ, ಅವನು ಇವುಗಳನ್ನು ಗಣಿಸುವದಿಲ್ಲ. ಮಹಾ ಪುರುಷನಲ್ಲಿ ಇಂಥ ವೃತ್ತಿಯು ಇರುವದರಿಂದ ಅವನು ಎಂಥವನಿದ್ದರೂ ಅವನಿಂದ ಉಚ್ಚ ಕಾರ್ಯಗಳಾಗುತ್ತ ಹೋಗುತ್ತವೆ.

ಮಹಾಪುರುಷನಲ್ಲಿ ನಿರ್ಮಾಣ ಮಾಡುವ ಶಕ್ತಿಯು ಇರುತ್ತದೆ. ಅವನ ಕಾರ್ಯಗಳು ಯಾವಾಗಲೂ ರಚನಾತ್ಮಕವಾಗಿರುತ್ತವೆ. ಅವನು ಯಾವಾಗಲೂ ಕಲ್ಪಕನಿರುತ್ತಾನೆ. ಅವನು ಗ್ರಂಥಕಾರನಿರಬಹುದು, ವೈಜ್ಞಾನಿಕನಿರಬಹುದು, ಅಥವಾ ತತ್ವವೇತ್ತನಾಗಿರಬಹುದು. ಯಾವ ನಿದ್ದರೂ ನಿತ್ಯಕ್ರಮದಂತೆ ಮಾಡಿದ್ದನ್ನು ಮಾಡುತ್ತ ಹೋಗುವ ಮನು ಷ್ಯನು ಅವನಲ್ಲ. ಎಲ್ಲರೂ ತುಳಿದ ಹಾದಿಯಲ್ಲಿ ಅವನು ಮೆಟ್ಟುವದಿಲ್ಲ. ಅವನು ಯೋಜಕನಿರುತ್ತಾನೆ.

ಆದರೆ ಅವನು ತೋರಿಕೆಯಲ್ಲಿ ವಾಡಿಕೆಯ ಮನುಷ್ಯನಂತೆಯೇ ಕಾಣುತ್ತಾನೆ. ಅವನು ಕೇವಲ ಸಾಮಾನ್ಯ ಬುದ್ಧಿಯುಳ್ಳವನು ಇರ ಬಹುದು. ಅನುಕೂಲ ಪರಿಸ್ಥಿತಿಯೂ ಕೂಡ ಅವನಿಗಿರಲಿಕ್ಕಿಲ್ಲ. ಆದರೆ ತಾನು ಕೈಕೊಂಡ ಕಾರ್ಯದಲ್ಲಿ ಮಾತ್ರ ಅವನು ಶ್ರಮವಹಿಸುತ್ತ ಮುಂದುವರಿಯುವವನಾಗಿರುತ್ತಾನೆ. ಅವನು ಮುಂದುವರಿಯುತ್ತ ಹೋದ ಹೋದ ಹಾಗೆ ಅವನಿಗೆ ಮಹಾಪುರುಷನ ಸ್ಥಾನವು ತಾನಾ ಗಿಯೇ ಪ್ರಾಪ್ತವಾಗುತ್ತ ಹೋಗುತ್ತದೆ.

ಇಂಗ್ಲಂಡದಲ್ಲಿ ಆಗಿಹೋದ ಮಹಾಪುರುಷರಲ್ಲಿ ನೆಲ್ಸನ್ನನ ಸ್ಥಾನವು ಉಚ್ಚತರವಾದದ್ದು. ಅವನು ಶ್ರೇಷ್ಠ ನೌಕಾಧಿಪತಿಯು. ತನ್ನ ನೌಕೆಯುಕಿಂತಲೂ ಹೆಚ್ಚು ಬಲವುಳ್ಳ ಇದಿರಾಳಿಗಳ ನೌಕೆಗಳೊಡನೆ ಯುದ್ಧ ಮಾಡುವ ಪ್ರಸಂಗಗಳು ಅವನಿಗೆ ಆಗಿಂದಾಗ್ಗೆ ಬರುತ್ತಿದ್ದವು ಆದರೆ ಆಗ ಅವನು ತನಗೆ ಅನುಕೂಲ ಸಮಯವು ಒದಗಲೆಂದು ಅದನ್ನು ಕಾಯುತ್ತ ಎಂದೂ ಕುಳ್ಳಿರಲಿಲ್ಲ. ತತ್ಕ್ಷಣವೇ ಅವನು ಇದಿರಾಳಿಗಳ ಮೇಲೇರಿ ಹೋಗುವನು. ಮುಂದುವರಿಯುವದೇ ಅವನ ನಿತ್ಯದ ಹಂಬಲವಾಗಿತ್ತು. ಯುದ್ಧಕಾಲದಲ್ಲಿ ಅವನ ಒಂದು ಕೈಯು ಹೋಯಿತು. ಒಂದು ಕಣ್ಣನ್ನು ಕಳೆದುಕೊಂಡನು. ಆದರೆ ಕಡೆಯವರೆಗೂ ಶತ್ರುಗಳೊಡನೆ ಕಾದಲು ಮುಂದುವರಿದನು. ಆದರಲ್ಲಿಯೇ ಅವನು ತನ್ನ ಪ್ರಾಣವನ್ನು ಕಳೆದುಕೊಂಡನು. ಇದರಿಂದ ಅವನು ಜಗತ್ಪ್ರಸಿದ್ಧನಾದನು.

ಯುದ್ಧ ಕಾರ್ಯಗಳಲ್ಲಿ ಮಿಗಿಲಾದ ಶೌರ್ಯತೋರಿಸಿದವರಿಗೆ ಇಂಗ್ಲಂಡದ ಬಾದಶಹರು ವ್ಹಿ. ಸಿ. ಎಂಬ ಪದವಿಯನ್ನು ಕೊಡುವದುಂಟು. ಶೂರ ಪುರುಷರಿಗೆಯೇ ಇದು ಸಲ್ಲುತ್ತದೆ. ಒಂದು ದಿನ ಹಿಂದಿನ ಜಾರ್ಜಬಾದಶಹರು ಇಂಥ ೩೨೪ ಜನರನ್ನು ತಮ್ಮ ಅರಮನೆಗೆ ಬರಮಾಡಿಕೊಂಡು ಸನ್ಮಾನಿಸಿದರು. ಇವರಲ್ಲಿ ಕೆಲವರು ಸಾಮಾನ್ಯ ಶಿಪಾಯಿರೂ ಕೆಲವರು ಉಚ್ಚ ಸೈನ್ಯಾಧಿಪತಿಗಳೂ ಕೆಲವರು ಸುಶಿಕ್ಷಿತ ಗ್ರ್ಯಾಜ್ಯುಏಟರೂ ಕೆಲವರು ಅಂಗಡಿಗಳಲ್ಲಿಯ ಕಾರಕೂನರೂ ಇದ್ದರು. ಶೂರತನವು ಎಲ್ಲರಲ್ಲಿಯೂ ವಾಸಿಸುತ್ತದೆ. ಈ ಗುಣವು ಎಲ್ಲ ಪಂಗಡದವರಲ್ಲಿಯೂ ಇರುತ್ತದೆ.

ಆದರೆ ಸಾವನ್ನು ನಿರ್ಭಯದಿಂದ ಎದುರಿಸಿದ ಈ ವ್ಹಿ. ಸಿ. ಪದವಿಯನ್ನು ಹೊಂದಿದ ಈ ಪುರುಷರ ಮುಖಮುದ್ರೆಗಳಲ್ಲಿ ಕಠೋರತನವಿರಲಿಲ್ಲ. ಅವುಗಳಲ್ಲಿ ಸೌಮ್ಯ, ಶಾಂತ, ಮತ್ತು ಸಮಾಧಾನ ವೃತ್ತಿಯು ಕಂಗೊಳಿಸುತ್ತಿತ್ತು. ಅವರಾರೂ ಕ್ರೂರ ಮತ್ತು ರೌದ್ರಮುದ್ರೆಯುಳ್ಳವರಿರಲಿಲ್ಲ. ಇದಕ್ಕೆ ಬದಲಾಗಿ ಅವರಲ್ಲಿ ಕೆಲವರು ಸೂಕ್ಷ್ಮ ಮತ್ತು ಮೃದು ಶರೀರವುಳ್ಳವರಾಗಿದ್ದರು. ಅವರೆಲ್ಲರೂ ಸಾಮಾನ್ಯ ಸಭ್ಯಗೃಹಸ್ಥರಂತೆಯೇ ಕಾಣುತ್ತಿದ್ದರು. ಆದರೆ ಅವರೆಲ್ಲರಲ್ಲಿ ಮಿಗಿಲಾದ ಧೈರ್ಯವೊಂದಿತ್ತು. ಗಂಡಾಂತರಗಳಿಗೆ ಎಂದೂ ಅಂಜದ ಪ್ರಭಾವವು ಅವರ

ದಾಗಿತ್ತು. ಇದೇ ಅವರ ವೈಶಿಷ್ಟ್ಯವು. ಇದರಿಂದಲೇ ಅವರು ಮಹಾ ಪುರುಷರ ವರ್ಗದಲ್ಲಿ ಗಣಿಸಲ್ಪಡುವವರಾದರು.

ಸ್ತ್ರೀಯರು ಗಂಡಸರಂತೆಯೇ ಧೈರ್ಯಶಾಲಿಗಳಿರುತ್ತಾರೆ. ತಾಯಿಯು ಸುಡುತ್ತಲಿರುವ ಮನೆಯಲ್ಲಿರುವ ತನ್ನ ಮಗುವನ್ನು ಉಳಿಸಲಿಕ್ಕೆ ನಿರ್ಭಯದಿಂದ ಜ್ವಾಲೆಯೊಳಗೆ ಧುಮುಕಿ ಮುಂದೆ ಹೋಗುವದನ್ನು ಅನೇಕರು ಕಂಡಿದ್ದಾರೆ. ಧೈರ್ಯವು ಗಂಡಸರಿಗೆ ಮಾತ್ರವಿರುತ್ತದೆಂದು ಯಾರೂ ತಿಳಿಯಕೂಡದು. ಕಾಳಗಗಳಲ್ಲಿ ಸ್ತ್ರೀಯರು ಧೈರ್ಯ ತೋರಿಸಿದ್ದರ ಉದಾಹರಣೆಗಳು ಇತಿಹಾಸದಲ್ಲಿ ಅನೇಕವಿರುತ್ತವೆ.

ಧೈರ್ಯದ ಮಹತ್ವವು ವ್ಯವಹಾರದಲ್ಲಿಯೂ ಕೂಡ ಉಂಟು. ಅಂಗಡಿಯಲ್ಲಿ ಲಾಭವಾಗುವದು ಅದರ ಯಜಮಾನನ ಧೈರ್ಯದ ಮೇಲೆ ಅವಲಂಬಿಸಿದೆ. ಅವನು ಹೊಸತಾದುದನ್ನು ಕೈಕೊಳ್ಳುವಲ್ಲಿ ಧೈರ್ಯವುಳ್ಳವನಾಗಿರಬೇಕು. ಇದರಲ್ಲಿ ಅವನಿಗೆ ತೊಂದರೆಗಳುಂಟಾಗಬಹುದು. ಕೆಲವೊಂದು ವೇಳೆ ಅವನಿಗೆ ಅಪಯಶಸ್ಸೂ ಬರಬಹುದು. ಆದರೆ ಅವನು ಎದೆಗುಂದದೆ ತನ್ನ ಕಾರ್ಯಗಳನ್ನು ಮುಂದುವರಿಸುತ್ತಾ ಇರುವನು.

ಇಂಥ ಧೈರ್ಯವು ಮಹಾಪುರುಷರಲ್ಲಿ ಚಿಕ್ಕಂದಿನಿಂದಲೂ ಬಹುಶಃ ವಾಸವಾಗಿರುತ್ತದೆ. ಚಿಕ್ಕ ಬಾಲಕರಿರುವಾಗಲೇ ಅಂದರೆ ಅವರ ಆಟಗಳಲ್ಲಿ, ಅವರ ವರ್ತನೆಯಲ್ಲಿ, ಈ ಗುಣವು ಮೊದಲು ಪ್ರಕಟವಾಗುತ್ತದೆ. ಆಗಿಂದಾಗ್ಗೆ ಅವರು ಅದನ್ನು ತಮ್ಮ ನಿತ್ಯದ ವ್ಯವಹಾರದಲ್ಲಿ ಉಪಯೋಗಿಸುತ್ತ ಹೋಗುತ್ತಾರೆ. ಇದರಿಂದ ಅದು ಅವರ ಸ್ವಭಾವವಾಗಿಯೇ ಉಳಿದುಬಿಡುತ್ತದೆ. ಧೈರ್ಯವು ಮನುಷ್ಯನ ಹುಟ್ಟು ಗುಣವಲ್ಲ. ನಿತ್ಯದ ಅಭ್ಯಾಸದಿಂದ ಇದನ್ನು ಉಂಟುಮಾಡಿಕೊಳ್ಳಬಹುದು. ಇದನ್ನು ಮನಶ್ಶಕ್ತಿಯ ಮೂಲಕ ದೃಢಪಡಿಸಿಕೊಳ್ಳಬಹುದು. ಈ ಧೈರ್ಯಕ್ಕೆ ಉಚ್ಚ ಧ್ಯೇಯವನ್ನು ಸಂಗಡಿಸಿದಲ್ಲಿ ಮನುಷ್ಯನಿಂದ ಮಹತ್ವದ ಕಾರ್ಯಗಳು ಆಗಹತ್ತುತ್ತವೆ.

ಆದ್ದರಿಂದ ವ್ಯವಹಾರದಲ್ಲಿ ನಮ್ಮ ತರುಣರು ಕಠಿಣವಿರುವ ಕೆಲಸಗಳನ್ನು ಮಾಡಲು ಯಾವಾಗಲೂ ಆಶಿಸಬೇಕು. ಇದಕ್ಕೆ ಅವರು ಹಿಂಜ

ರಿಯಬಾರದು. ಅವರು ಹಗುರು ಕೆಲಸಗಳನ್ನು ಎಂದೂ ಬೇಡಬಾರದು. ಯಾರು ಕಠಿಣ ಕೆಲಸಗಳನ್ನು ಬೇಡುತ್ತಾರೋ ಅವರು ಉಳಿದವರಿಗಿಂತಲೂ ಬಹು ಬೇಗನೆ ಮುಂದುವರಿಯಹತ್ತುತ್ತಾರೆ.

ಆದರೆ ಬಹು ಜನರು ತಮಗೆ ಹಗುರು ಕೆಲಸಗಳನ್ನು ಕೊಡಬೇಕೆಂದು ಯಾವಾಗಲೂ ಬಯಸುವದುಂಟು. ಅವರು ಕಠಿಣ ಕೆಲಸಗಳಲ್ಲಿರುವ ಜವಾಬುದಾರಿಗಳನ್ನೂ ಗಂಡಾಂತರಗಳನ್ನೂ ಎದುರಿಸಲು ಹಿಂಜರಿಯುತ್ತಾರೆ. ಅವರು ವಿನೋದದಲ್ಲಿ ಕಾಲಕಳೆಯಲು ಯಾವಾಗಲೂ ಬಗೆಯುತ್ತಾರೆ.. ಇಲ್ಲವೆ ಇತರರು ಹೇಳಿದಂತೆ ವರ್ತಿಸುತ್ತ ಹೋಗುತ್ತಾರೆ. ಇವರ ಆಯುಷ್ಯವೆಲ್ಲ ಇತರರು ಹೇಳಿದಂತೆ ನಡಿಯುವದು ಹುತ್ತು ವಿನೋದ ಇವುಗಳಲ್ಲಿಯೇ ಹೋಗಿಬಿಡುತ್ತದೆ. ಕೆಲಸವನ್ನು ಸ್ವಲ್ಪಮಾತ್ರ ಮಾಡಿ ಬಹಳ ಗಳಿಸಬೇಕೆಂದು ಇವರ ಬಲವಾದ ಆಸೆ. ಆದರೆ ಇವರು ಕಡೆಯ ವರೆಗೂ ಸಾಮಾನ್ಯರಂತೆ ಉಳಿದು, ಕಡೆಗೆ ಏನೂ ಮಾಡದೆ ಸತ್ತುಹೋಗಿ ಬಿಡುತ್ತಾರೆ.

ಅನೇಕ ತರುಣರು ವ್ಯವಹಾರದಲ್ಲಿ ಬಿದ್ದ ಬಳಿಕ ಗಂಡಾಂತರಗಳಿಲ್ಲದ ಹಗುರು ದಾರಿಯನ್ನು ಹುಡುಕುವದರಲ್ಲಿಯೇ ಕಾಲಕಳೆಯುತ್ತಾರೆ. ಆದರೆ ಆಯುಷ್ಯದಲ್ಲಿ ಹಗುರು ದಾರಿ ಎಂಬುದು ಇಲ್ಲ. ಯಾರಾದರೂ ಇಂಥ ದಾರಿಯು ಇರುತ್ತದೆಂದು ಹೇಳಿದರೆ ಅದು ನಿಜವಲ್ಲ. ಜಗತ್ತಿನಲ್ಲಿ ಸಂಪೂರ್ಣ ಸುರಕ್ಷಿತವಿದ್ದುದು ಎಲ್ಲಿಯೂ ಇಲ್ಲ. ನಮ್ಮ ತರುಣರು ಸುಶಿಕ್ಷಿತರಾದ ಬಳಿಕ ೨೦ ವರ್ಷ ಕಾಲಕಳೆದ ನಂತರ ಇದು ಅವರಿಗೆ ಗೊತ್ತಾಗಹತ್ತುತ್ತದೆ. ಯಾವ ವ್ಯವಹಾರವಿದ್ದರೂ ಅದರಲ್ಲಿ ಅನಿಶ್ಚಿತತೆಯು ಇದ್ದೇ ಇರುತ್ತವೆ. ಆದ್ದರಿಂದ ಕಾಲ ಕಾಲಕ್ಕೆ ಉಂಟಾಗುವ ಗಂಡಾಂತರಗಳಿಂದ ಓಡಿ ಹೋಗದೆ ಅವುಗಳನ್ನು ಇದಿರಿಸುವದರಲ್ಲಿಯೇ ಪುರುಷಾರ್ಥವಿದೆ.

ಮೊಸಳೆಗಳಿದ್ದ ಒಂದು ನದಿಯಲ್ಲಿ ಒಬ್ಬ ವೃದ್ಧನು ಅಂಜಿಕೆ ಇಲ್ಲದೆ ಸ್ನಾನ ಮಾಡುತ್ತಿದ್ದನು. ಅದನ್ನು ಒಬ್ಬನು ನೋಡಿ ಇದರಲ್ಲಿ ಸ್ನಾನ ಮಾಡಲು ನಿನಗೆ ಅಂಜಿಕೆ ಹೇಗೆ ಬರುವದಿಲ್ಲ ಎಂದು ಕೇಳಲು ಅವನು ಉತ್ತರ ಕೊಟ್ಟದ್ದು—“ಈ ಮಡುವಿನಲ್ಲಿ ಮೊಸಳೆಯು ಇದ್ದಿರಬಹುದು ಅಥವಾ ಇರಲಿಕ್ಕಿಲ್ಲ. ಒಂದು ವೇಳೆ ಎಲ್ಲಾದರೂ ಒಂದು

ಇದ್ದರೆ, ಅದರ ದೃಷ್ಟಿಗೆ ನಾನು ಬೀಳಲಿಕ್ಕಿಲ್ಲ. ಒಂದು ವೇಳೆ ಅದು ನನ್ನನ್ನು ನೋಡಿದ್ದರೆ. ಅದು ಹಸಿದಿರಲಿಕ್ಕಿಲ್ಲ. ಆದ್ದರಿಂದ ಅದು ನನ್ನ ಮೇಲೆ ಬರಲಿಕ್ಕಿಲ್ಲ. ಒಂದು ವೇಳೆ ಅದು ನನ್ನ ಮೇಲೆ ಬಂದರೂ ನನ್ನ ಮೇಲಿನ ಅದರ ಗುರಿಯು ತಪ್ಪಬಹುದು. ಹೀಗೆ ಸಂಗತಿಗಳಿರುವದರಿಂದ ನಾನು ಅಂಜುವದಿಲ್ಲ ಎಂದು ಹೇಳಿದನು. ಆ ಮುದುಕನು ಆ ಮಡುವಿನಲ್ಲಿಯೇ ಯಾವಾಗಲೂ ಜಳಕ ಮಾಡುತ್ತಿದ್ದನು. ಆದರೆ ಅವನಿಗೆ ಎಂದೂ ಅಪಾಯುವಾಗಿರಲಿಲ್ಲ. ಜಗತ್ತೆಂಬುದು ಹೀಗೆಯೇ ಇದೆ. ಅದರಲ್ಲಿ ಗಂಡಾಂತರಗಳಿವೆ. ಅವುಗಳಿಗಂಜುವವನಿಂದ ಮಹತ್ವದ ಕಾರ್ಯಗಳಾಗವು.

ಆದ್ದರಿಂದ ಮನುಷ್ಯನು ತನ್ನ ಜೀವಿತದಲ್ಲಿ ಎದೆಗುಂದಬಾರದು. ಹೊಸತಾದುದನ್ನು ಮಾಡಲು ಹಿಂಜರಿಯಬಾರದು. ಯಾವಾಗಲೂ ಮುಂದುವರಿಯುತ್ತಿರಬೇಕು. ಎಂಥ ತೊಂದರೆಗಳು ಬಂದರೂ ಹಿಡಿದುದನ್ನು ಬಿಡೆನೆಂಬ ಧೈರ್ಯವು ಅವನಲ್ಲಿರಬೇಕು. ಆದರೆ ಜನರಲ್ಲಿ ಕಲ್ಪನಾ ಸೃಷ್ಟಿಯಲ್ಲಿ ಯಾವಾಗಲೂ ಓಲಾಡುವವರೇ ಬಹಳ. ಅವರು ಹೊಸದಾದುದನ್ನು ಕೈಕೊಳ್ಳಲು ಬಲು ಹಿಂಜರಿಯುತ್ತಾರೆ. ಇವರಿಗೆ ತೊಂದರೆಗಳು ಬಂದರೆ ಇಲ್ಲವೆ ಯಾರಾದರೂ ಟೀಕಿಸಿದರೆ ಸಾಕು, ಅವರು ಕೂಡಲೆ ಧೈರ್ಯಗುಂದುತ್ತಾರೆ. ಇವರು ಜಾಣರಿರಬಹುದು. ಆದರೆ ಅವರಲ್ಲಿ ದೃಢವಾದ ಆತ್ಮವಿಶ್ವಾಸ ಮತ್ತು ಧೈರ್ಯವು ಇರುವದಿಲ್ಲವಾದ್ದರಿಂದ ಮಹತ್ವದ ಕಾರ್ಯಗಳು ಅವರಿಂದ ಆಗಲಾರವು.

ಹೊಸ ಕಾರ್ಯಗಳನ್ನು ಆರಂಭಿಸಿದ ಕೂಡಲೆ ಜನರು ತಮ್ಮನ್ನು ಹೊಗಳುವರೆಂದು ಇವರು ಬಹಳ ಅಪೇಕ್ಷಿಸುತ್ತಾರೆ. ಆದರೆ ಜನರು ಹೊಗಳುವ ಬದಲು ಅವರನ್ನು ಟೀಕಿಸಹತ್ತುತ್ತಾರೆ. ಟೀಕೆಯನ್ನು ಲೆಕ್ಕಿಸದೆ ಧೈರ್ಯದಿಂದ ಮುಂದುವರಿದರಾದರೆ, ಜನರು ಅವರ ದಾರಿಯಲ್ಲಿ ಬುದ್ಧಿ ಪೂರ್ವಕವಾಗಿ ಪ್ರತಿಬಂಧಗಳನ್ನು ಒಡ್ಡಹತ್ತುತ್ತಾರೆ. ಜನರು ಅವರಿಗೆ ಎಂದೂ ಉತ್ತೇಜನ ಕೊಡುವದಿಲ್ಲ. ಆದ್ದರಿಂದ ಹೊಸ ಕಾರ್ಯಗಳನ್ನು ಕೈಕೊಳ್ಳುವದು ಎಷ್ಟು ಮಹತ್ವವಾದುದೋ, ಅದನ್ನು ಮುಂದುವರಿಸಲಿಕ್ಕೆ ಬೇಕಾಗುವ ಧೈರ್ಯವು ಅದಕ್ಕೂ ಬಹಳ ಹೆಚ್ಚು ಮಹತ್ವವಾದುದು. ಹೀಗಿದ್ದರೆ ಮಾತ್ರ ಆರಂಭಿಸಿದ ಕಾರ್ಯವನು ಕೊನೆಗಾಣಿಸಲಿಕ್ಕೆ ಮನುಷ್ಯನು ಸಮರ್ಥನಾಗುತ್ತಾನೆ.

ಆರಂಭದಲ್ಲಿ ನಮ್ಮ ತರುಣರು ಮಹತ್ವಾಕಾಂಕ್ಷಿಗಳಾಗಿರುತ್ತಾರೆ. ಅವರು ತಮ್ಮ ಕಾರ್ಯದಲ್ಲಿ ಸಿದ್ಧಿಯು ಉಂಟಾಗಬೇಕೆಂದು ಅತ್ಯಂತ ಉತ್ಸಾಹದಿಂದ ಮೊದಲು ಕಾರ್ಯಮಾಡತೊಡಗುತ್ತಾರೆ. ತಮಗೆ ಮುಂದೆ ಆಗಬಹುದಾದ ಸುಖದ ಕಲ್ಪನೆಯಲ್ಲಿ ಸಂಪೂರ್ಣವಾಗಿ ಮುಳುಗಿ ಹೋಗಿರುತ್ತಾರೆ. ಆದರೆ ಸ್ವಲ್ಪಕಾಲದಲ್ಲಿ ಅವರ ಮೇಲೆ ಹೊಡೆತಗಳು ಬೀಳಹತ್ತುತ್ತವೆ. ಆಗ ಅವರು ಹಿಂದೆ ಮುಗ್ಗರಿಸಿ ಬೀಳುವರು. ಅವರ ಅಭಿಲಾಷೆಗಳು ಕೂಡಲೆ ಕುಗ್ಗಿಹೋಗುವವು. ಹೀಗಾದ ಕೂಡಲೆ ಅವರಿಗೆ ಅಪಯಶಸ್ಸು ಉಂಟಾಗಿ ಹಿಂದೆಬಿದ್ದು ಹೋಗುವರು. ಇಂಥ ತರುಣರು ಲಕ್ಷಾವಧಿ ಜನರು ಇರುವರು. ಇವರು ಆರಂಭದಲ್ಲಿ ಕೆಲವೊಂದು ಉಚ್ಚ ಧ್ಯೇಯುವನ್ನು ಅನುಸರಿಸುವದು ನಿಜವು. ಆದರೆ ಅವರಿಗೆ ಮುಂದೆ ತೊಂದರೆಗಳು ಬರಹತ್ತುವವು. ಹಾಸಿಯೂ ಕೂಡ ಆಗುವದು. ಆಗ ಅವರಲ್ಲಿ ಗಟ್ಟಿ ಮನಸ್ಸು ಇರದ್ದರಿಂದ ಅವರಿಗೆ ತಮ್ಮ ಧ್ಯೇಯುವನ್ನು ಸಾಧಿಸುವದು ಆಗುವದಿಲ್ಲ. ಹತಾಶರಾಗಿ ಹಿಂದೆ ಬೀಳುತ್ತಾರೆ.

ನಮ್ಮ ತರುಣರು ಮೊದಲು ಕೆಲವೊಂದು ವ್ಯವಹಾರವನ್ನು ಆರಂಭಿಸುವದುಂಟು. ಆರಂಭದಲ್ಲಿ ಇರುವ ಅದರಲ್ಲಿಯು ಹೊಸತನವು ಅವರಿಗೆ ಮನೋರಂಜಕವಾಗಿ ಕಾಣುತ್ತದೆ. ಆಗ ಅವರ ಅಂಗಡಿ ಅಥವಾ ಕಾರ್ಯಾಲಯುವು ಒಂದು ಸುಂದರವಾದ ಬೊಂಬೆಯುಂತೆ ಶೋಭಾಯುಮಾನವಾಗಿ ತೋರುತ್ತದೆ. ಆದರೆ ಈ ಹೊಸತನದ ಶೋಭೆಯು ಬಹಳ ದಿವಸ ಉಳಿಯುವದಿಲ್ಲ. ಆಗ ಅವರ ಪರೀಕ್ಷಾ ಕಾಲವು ಬರುತ್ತದೆ. ಒಂದೇ ರೀತಿಯಾಗಿ ಮಾಡುವ ನಿತ್ಯದ ವ್ಯವಹಾರವು ಅವರಿಗೆ ಬೇಸರಿಕೆಯುನ್ನುಂಟು ಮಾಡಹತ್ತುತ್ತದೆ. ಆದರೆ ನಿತ್ಯದ ವಾಡಿಕೆಯು ಸಣ್ಣಪುಟ್ಟ ಕೆಲಸವನ್ನು ಲವಲವಿಕೆಯಿಂದ ಮತ್ತು ಚಟುವಟಿಕೆಯಿಂದ ಮಾಡುವದರಲ್ಲಿಯೇ ಕಾರ್ಯದ ಅಂತಿಮ ಯುಶಸ್ಸಿರುತ್ತರೆಂಬುದನ್ನು ಇವರು ಅರಿಯುರು. ಇದು ಗೊತ್ತಿರದ್ದರಿಂದ ಅವರು ಬರಬರುತ್ತ ನಿರಾಶರಾಗುವರು ಮತ್ತು ಉದ್ಯೋಗದಲ್ಲಿ ನಿರುತ್ಸಾಹವುಳ್ಳವರಾಗುವರು. ಇಂಥವರು ಮಹತ್ವದ ಕಾರ್ಯಗಳನ್ನು ಹೇಗೆ ಮಾಡಬಲ್ಲರು?

ವ್ಯವಹಾರವು ಕಲ್ಲಿನಿಂದ ಕಟ್ಟಿದ ಸ್ಥಿರವಾದ ಮನೆಯುಂತಿರುವದಿಲ್ಲ. ಅದರಲ್ಲಿ ನಿತ್ಯವೂ ಹೊಡೆದಾಟವಿದೆ. ಮನುಷ್ಯನ ಅವಯುವಗಳಲ್ಲಿ

ಅಳಿವು ಉಳಿವು ಇವೆರಡರ ಹೋರಾಟವು ಪ್ರತಿಕ್ಷಣ ನಡಿದಿರುತ್ತದೆ. ಹಾಗೆಯೇ ನಮ್ಮ ಜೀವನಕ್ರಮವಿದೆ. ಅದು ವ್ಯವಸ್ಥಿತವಾಗಿದ್ದರೆ ಮಾತ್ರ ನಾವು ಉಳಿವನ್ನು ಹೆಚ್ಚಿಸಿಕೊಂಡು ಸುಖವಾಗಿ ಬಾಳುತ್ತೇವೆ.

ಅನೇಕರು ತಮಗೆ ಅನುಕೂಲ ವೇಳೆಯು ಬರಬಹುದೆಂದು ಅದನ್ನು ನಿರೀಕ್ಷಿಸುತ್ತ ಕಾಲಕಳೆಯುವದುಂಟು. ಇಂಥವರು ಅಸಂಖ್ಯಾತ ರಾಗಿರುತ್ತಾರೆ. ಆದರೆ ಅನುಕೂಲ ವೇಳೆಯು ತಾನಾಗಿಯೇ ಎಂದೂ ಯಾರಿಗೂ ಬರುವದಿಲ್ಲ. ಅದು ಯಾರನ್ನೂ ತನ್ನೊಡನೆ ತಾನಾಗಿಯೇ ಕರೆದೊಯ್ದು ಆನಂದದಲ್ಲಿ ಮುಳುಗಿಸುವದಿಲ್ಲ. ಆದರೆ ಅದರ ಬದಲು ನಾನಾತರದ ತೊಂದರೆಗಳು, ವಿಪತ್ತುಗಳು, ದ್ರವ್ಯದ ಹಾನಿಗಳು, ರೋಗ್ಯ ಗಳು, ಸ್ಪರ್ಧೆಗಳು ಇವುಗಳೇ ನಿತ್ಯ ಮುಕುರಿಬಂದು ಅವರ ಮೇಲೆ ಬೀಳು ತ್ತದೆ. ಆದ್ದರಿಂದ ಅನುಕೂಲ ವೇಳೆ ಎಂದರೆ ಹೊರಗಿಂದ ನಿನ್ನೆಡೆಗೆ ತಾನಾಗಿಯೇ ಬರುವಂಥ ಒಂದು ವಸ್ತುವೆಂದು ಭಾವಿಸ ಕೂಡದು. ಅದು ನಿನ್ನಲ್ಲಿಯೇ ಇದೆ. ಅದು ಕಾರ್ಯಮಾಡಬೇಕೆಂಬ ಮನಸ್ಸಿನ ಉತ್ಕಟ ಲವಲವಿಕೆ ಎಂದು ಬಗೆಯಬೇಕು. ಅದೊಂದು ಮನೋವೃತ್ತಿಯು ಇರುತ್ತದೆ. ಆವೃತ್ತಿಯು ನಿನ್ನಲ್ಲಿಯೇ ಇರುತ್ತಿದೆ. ಅದು ಹೊರಗಿನಿಂದ ಬಂದುದಲ್ಲ.

ಆದ್ದರಿಂದ ಕೆಲವರಿಗೆ ಎಂಥ ಕಷ್ಟಗಳು ಬಂದರೂ ಎಲ್ಲ ಕಡೆಗೂ ಅನುಕೂಲತೆಯ ಪರಿಸ್ಥಿತಿಯೇ ಅವರಿಗೆ ತೋರುತ್ತದೆ. ಇವರೇ ಮಹಾ ಪುರುಷರು. ಅವರ ವಿಚಾರ ಮತ್ತು ನಿರೀಕ್ಷಣ ಶಕ್ತಿಗಳು ಯಾವಾಗಲೂ ಹದನಾಗಿರುತ್ತವೆ. ಆದರೆ ಯಾರ ಬುದ್ಧಿಶಕ್ತಿಯು ತೀವ್ರವಾಗಿರುವದಿ ಲ್ಲವೋ ಅವರು ಜಗತ್ತಿನಲ್ಲಿ ಕುರುಡರಂತಿರುತ್ತಾರೆ. ಸುತ್ತಲೂ ತರತರದ ಸುಂದರ ನೋಟಗಳಿರಬಹುದು. ಆದರೂ ಅವುಗಳನ್ನು ಅ[illegible]ರು ಕಾಣರು. ಅವರಿಗೆ ಎಲ್ಲಕಡೆಗೂ ಮುಳ್ಳುಗಳೇ ತೋರುತ್ತವೆ.

ಕೊಲಂಬಸ, ಜೇಮ್ಸವಾಟ್ಟ, ಶೆಕ್ಸಪೀಯರ, ಕ್ರಾಮವೆಲ್ಲ, ನೆಪೋಲಿಯನ್ನ ಇವರ ಚರಿತ್ರೆಗಳನ್ನು ನೋಡಿರಿ. ಅವರಿಗೆ ಆರಂಭ ದಲ್ಲಿ ಯಾವ ಅನುಕೂಲತೆಗಳು ಇದ್ದವು?. ಯಾವವೂ ಇರಲಿಲ್ಲ. ಅವರು ಅನುಕೂಲ ಪರಿಸ್ಥಿತಿಯನ್ನು ಉಂಟುಮಾಡಿಕೊಂಡರು. ಅವರು ಅವುಗಳನ್ನು ಹುಡುಕುತ್ತ ಎಂದೂ ಹೋಗಲಿಲ್ಲ. ಅವರು ಪ್ರಯತ್ನ

ಶೀಲರು. ಯಾವಾಗಲೂ ದುಡಿಯುವವರು. ದುಡಿತದಲ್ಲಿಯೇ ಅವರಿಗೆ ಆನಂದವು. ಆದ್ದರಿಂದ ಅವರು ಮಹಾಪುರುಷರಾದರು.

ಮನುಷ್ಯನು ಶ್ರೇಷ್ಠನಾಗುವದು ಅವನ ಮನಶ್ಶಕ್ತಿ, ಸ್ಥೈರ್ಯ ಮತ್ತು ಪರಂತರ ಪ್ರಯತ್ನ ಇವುಗಳ ಮೇಲೆ ಅವಲಂಬಿಸಿದೆ. ಆದ್ದರಿಂದ ಯಾವನಿದ್ದರೂ ಕೂಡ ನಾನು ಜಯಶೀಲನಾಗುವೆನೋ ಹೇಗೆಂಬುದನ್ನು ತಿಳಿಯುವದಕ್ಕೋಸ್ಕರ ಜ್ಯೋತಿಷ್ಯವನ್ನು ಅವನು ಎಂದೂ ಕೇಳಬಾರದು. ನಕ್ಷತ್ರಗಳ ಬಲದ ಮೇಲೆ ಮನುಷ್ಯನ ಶ್ರೇಯಸ್ಸು ಅವಲಂಬಿಸಿರುವದಿಲ್ಲ. ಅವನು ಪ್ರಯತ್ನಶೀಲವಾದರೆ ನಕ್ಷತ್ರಗಳು ಅವನ ಬೆನ್ನುಹತ್ತಿಬರುವವು.

ಜಗತ್ತಿನಲ್ಲಿ ಆಗಿಹೋದ ಮಹಾಪುರುಷರು ಹೀಗೆಯೇ ಆಚರಿಸಿದ್ದಾರೆ.

---

## " ನುಡಿಯಂತೆ ನಡೆಯು ಸ್ಥಿರಗೊಳ್ಳಬೇಕು. "

( ಲೇಖಕ— ಎನ್. ರಾಚೋಟಿಯ್ಯ ಕಾನಕಾನಹಳ್ಳಿ )

### ವಚನ.

ಆಚಾರಲಿಂಗಾನುಭಾವಿಯಾದೊಡೆ ಅಂಗಗುಣವಳಿದಿರಬೇಕು. ಗುರುಲಿಂಗಾನುಭಾವಿಯಾದೊಡೆ ಮನದ ಕಲ್ಮಶವಳಿದಿರಬೇಕು. ಶಿವಲಿಂಗಾನುಭಾವಿಯಾದೊಡೆ ಶಿವಭಕ್ತರೊಕ್ಕುಮಿಕ್ಕುದ ಸವಿಯಬೇಕು. ಜಂಗಮ ಲಿಂಗಾನುಭಾವಿಯಾದೊಡೆ ಸರ್ವ ಪ್ರಾಣಿ ಹಿತಚಿಂತಕನಾಗಬೇಕು. ಪ್ರಸಾದ ಲಿಂಗಾನುಭಾವಿಯಾಡೆ ಎಡೆಬಿಡದೆ ಶಬ್ದ ಪ್ರಸಾದವಾಗಿರಬೇಕು. ಮಹಲಿಂಗಾನುಭಾವಿಯಾದೊಡೆ ಮಹದರಿವು ತಾನೇ ತಾನಾಗಿರಬೇಕಲ್ಲದೆ ಅಂಗವಕಟ್ಟ ಲಿಂಗದ ಗೊತ್ತನು ಹಿಡಿಯದೆ ಎಮಗೆ ಉಪದೇಶವಾಗಿದೆ ಎನ್ನುತ್ತ ಸತಿಪತಿಗಳು ಏಕಾರ್ಥವಾಗಿ ನಡೆಯದೆ ಮತಿಗೆಟ್ಟು ಪೋಗುವ ಮೂರ್ಖ ಮನುಜರ ಕಂಡು ಎನ್ನ ಮನನಾಚಿತ್ತು ಕಾಣಾ ಓಂಕಾರೇಶ್ವರ ಪ್ರಿಯ ಮಹಾಲಿಂಗವೇ.

---

# ಗ್ರಂಥ ವಿಮರ್ಶೆ.

**ಕನ್ನಡ ನಾಡಿನ ಚರಿತ್ರೆ** ( ೨ ನೆಯ ಭಾಗ ):— ಈ ಗ್ರಂಥವು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಗಿರುತ್ತದೆ. ಇದನ್ನು ಡಾ॥ ಎಸ್. ಸಿ. ನಂದಿಮಠ ಎಮ್. ಎ, ಪಿ. ಎಚ್. ಡಿ. ಪ್ರಿನ್ಸಿಪಾಲ ಶ್ರೀ ಬಸವೇಶ್ವರ ಕಾಲೇಜ ಬಾಗಲಕೋಟ ಇವರು ರಚಿಸಿರುತ್ತಾರೆ. ಇದರಲ್ಲಿ ಕರ್ನಾಟಕ ಧರ್ಮಗಳ ವಿಷಯವಾಗಿ ಸವಿಸ್ತೃತ ವಿವೇಚನೆಯು ಇದೆ. ಗ್ರಂಥದ ಒಟ್ಟು ಪುಟಸಂಖ್ಯೆ ೨೩೪, ಬೆಲೆ ರೂ. ೧-೮-೦ ಇದೆ.

ಕರ್ನಾಟಕ ದೇಶವು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಯಾವಾಗಲೂ ಮುಂದುವರಿದದ್ದಿರುತ್ತದೆ. ಆದ್ದರಿಂದ ಕರ್ನಾಟಕವು ಹಿಂದುಸ್ಥಾನದಲ್ಲಿಯ ಎಲ್ಲ ಧರ್ಮಗಳ ಆಶ್ರಯಸ್ಥಾನವಾಗಿರುತ್ತದೆ. ಕರ್ನಾಟಕ ಧರ್ಮಗಳ ವಿವರಣೆಯಲ್ಲಿ ಇವೆಲ್ಲವುಗಳ ನಿರೂಪಣೆಯು ಅವಶ್ಯವಿರುತ್ತಿದೆ. ಇದಕ್ಕನುಸಾರವಾಗಿ ವೈದಿಕ ಧರ್ಮದ ಮತ್ತು ಶೈವ, ವೈಷ್ಣವ, ಅದ್ವೈತ, ಜೈನ, ಬೌದ್ಧ ಧರ್ಮಗಳ ವಿವೇಚನೆಯು ಈ ಗ್ರಂಥದಲ್ಲಿ ಬಂದಿರುತ್ತವೆ. ಅಲ್ಲದೆ ಕ್ರಿಶ್ಚನ್ನ ಮತ್ತು ಇಸ್ಲಾಮಿ ಧರ್ಮಗಳ ನಿರೂಪಣೆಯೂ ಕೂಡ ಇದರಲ್ಲಿರುತ್ತವೆ.

ಪೂರ್ವದ ವೈದಿಕ ಧರ್ಮದಲ್ಲಿ ಸೃಷ್ಟಿಯಲ್ಲಿ ತೋರುವ ದೃಶ್ಯಗಳು ಅಂದರೆ ಮೇಘರಾಜನಾದ ಇಂದ್ರನು, ಅಗ್ನಿ, ವರುಣ, ಸೂರ್ಯ, ಉಷಸ್ ಇವುಗಳನ್ನು ಶಾಂತಗೊಳಿಸುವ ಕ್ರಮಗಳಿದ್ದು, ಇವುಗಳೇ ಆಗಿನ ಧರ್ಮದಲ್ಲಿ ಸಮಾವೇಶವಾಗಿದ್ದವು. ಇವುಗಳ ಸಂಕ್ಷಿಪ್ತ ವಿವರಣೆಯು ಗ್ರಂಥಾರಂಭದಲ್ಲಿದೆ. ಮುಂದೆ ಹಿಂದೂ ಧರ್ಮದಲ್ಲಿ ತಾತ್ವಿಕ ವಿವೇಚನೆಗಳುಂಟಾಗಿ ಉಪನಿಷತ್ತುಗಳು ಉದ್ಭವಿಸಿದವು. ಈ ವಾಙ್ಮಯವು ಬರುಬರುತ್ತ ಬಹು ವಿಸ್ತಾರವಾಗುತ್ತ ಹೋಯಿತು. ಇವುಗಳ ಸಂಖ್ಯೆ ೨೦೦ ಕ್ಕಿಂತಲೂ ಕಡಿಮೆಯಾಗಿಲ್ಲ. ಇವುಗಳಲ್ಲಿ ೧೦ ಉಪನಿಷತ್ತುಗಳು ಬಹು ಮಹತ್ವವಾದವುಗಳು. ಉಪನಿಷತ್ತುಗಳ ಕಡೆಯ ಕಾಲದಲ್ಲಿ ಕರ್ಮಮಾರ್ಗ, ಸನ್ಯಾಸಮಾರ್ಗ, ಜ್ಞಾನಮಾರ್ಗ ಹೀಗೆ ಮೂರು ಮಾರ್ಗಗಳು ಉದಿಸಿದವು. ಈ ವಾಙ್ಮಯದಲ್ಲಿ ವೈದಿಕ ಕಾಲದ ದೇವತೆಗಳಿಗೆ ಸ್ಥಾನವಿಲ್ಲ. ಮುಂದೆ ಪೌರಾಣಿಕ ಕಾಲವು

ಉಂಟಾಗಿ ತ್ರಿಮೂರ್ತಿಗಳಿಗೆ ಅಂದರೆ ಶಿವ, ವಿಷ್ಣು, ಬ್ರಹ್ಮರಿಗೆ ಮಹತ್ವದ ಸ್ಥಾನವು ಪ್ರಾಪ್ತವಾಯಿತು. ಇವೆಲ್ಲವುಗಳ ವಿವರಣೆಯು ಈ ಗ್ರಂಥದಲ್ಲಿ ವಿಸ್ತಾರವಾಗಿ ಬಂದಿರುತ್ತದೆ.

ಆದರೆ ಕರ್ನಾಟಕದ ಜನತೆಯಲ್ಲಿ ಕ್ರಾಂತಿಯನ್ನುಂಟುಮಾಡಿದ್ದು ಶೈವಮತವು. ಶಿವನನ್ನು ಲಿಂಗರೂಪದಿಂದ ಪೂಜಿಸುವ ರೂಢಿಯು ಈಮತದಲ್ಲಿದೆ. ಶಿವನು ಸಚ್ಚಿದಾನಂದ, ನಿತ್ಯ, ಪರಿಪೂರ್ಣ, ಸರ್ವಶಕ್ತ, ನಿಷ್ಕಲ, ನಿರಂಜನನಾಗಿರುವನೆಂದು ಶೈವರು ತಿಳಿಯುತ್ತಾರೆ. ಆದ್ದರಿಂದ ಈ ಭಾವವನ್ನು ವ್ಯಕ್ತಗೊಳಿಸಲು ಶೈವರು ಲಿಂಗವನ್ನು ಕಲ್ಪಿಸಿದ್ದಾರೆ. ಆದರೆ ಅನೇಕರು ಲಿಂಗದ ಬಗ್ಗೆ ವಿಪರೀತಾರ್ಥವನ್ನು ಕಲ್ಪಿಸಿ ಅಂದರೆ ಅದು 'ಶಿಶ್ನದೇವ' ಎಂದು ತಿಳಿದು ಶೈವರ ಮನಸ್ಸಿಗೆ ಹತ್ತುವಂತೆ ಅರ್ಥಮಾಡುತ್ತಾರೆ. ಆದರೆ ಇದು ನಿರಾಧಾರವಾದದ್ದೆಂದು ಡಾ॥ ನಂದಿಮಠರವರು ಈ ಗ್ರಂಥದಲ್ಲಿ ಸಕಾರಣವಾಗಿ ಸಿದ್ಧಪಡಿಸಿದ್ದಾರೆ. ಶೈವರಲ್ಲಿ ಇಂಥ ಭಾವವು ಎಷ್ಟು ಮಾತ್ರವೂ ಇರುವದಿಲ್ಲ. ಲಿಂಗ ಪೂಜೆಯಲ್ಲಿ ಹೇಯವಾದ ಮತ್ತು ತ್ಯಾಜ್ಯವಾದ ವಸ್ತುಗಳ ಸಂಪರ್ಕವಿಲ್ಲ. ಈ ಪೂಜೆಯು ಬಹು ಪುರಾತನಕಾಲದ್ದಾಗಿರುತ್ತದೆ. ಆದ್ದರಿಂದ ಲಿಂಗದ ಅರ್ಥವು ತಾತ್ವಿಕವೂ ಪರಿಶುದ್ಧವೂ ಆಗಿರುತ್ತದೆಂದು ಗ್ರಂಥಕಾರರ ಅಭಿಪ್ರಾಯವಿರುತ್ತದೆ. ಅವರ ಈ ವಿವೇಚನೆಯು ಸಕಾರಣವಾಗಿರುತ್ತದೆ.

ಶೈವರಲ್ಲಿ ಅನೇಕ ಪ್ರಭೇದಗಳಿವೆ. ಅವುಗಳಲ್ಲಿ ಪಾಶುಪತ, ಶೈವ ಸಿದ್ಧಾಂತ ಮತ್ತು ವೀರಶೈವ ಇವು ಮುಖ್ಯವಾದವುಗಳು. ಇವುಗಳ ಸ್ಥೂಲ ವಿವೇಚನೆಯು ಈ ಗ್ರಂಥದಲ್ಲಿ ಬಂದಿರುತ್ತದೆ. ಈ ಧರ್ಮಗಳಲ್ಲೆಲ್ಲ ಉಚ್ಚ ವಾಙ್ಮಯವು ಉಂಟಾಗಿರುತ್ತದೆ. ಇವುಗಳಲ್ಲಿ ಕರ್ನಾಟಕದಲ್ಲಿ ಮಹತ್ವದ ಕ್ರಾಂತಿಯನ್ನು ಮಾಡಿದ ಧರ್ಮವು ವೀರಶೈವವು. ವೀರಶೈವ ಧರ್ಮದ ಸಾಮಾನ್ಯ ಸ್ವರೂಪ, ಅದರ ವೈಶಿಷ್ಟ್ಯವಾದ ಷಟ್‌ಸ್ಥಲ ಮತ್ತು ಅದರ ಪ್ರಗತಿ ಇವುಗಳ ಸಾದ್ಯಂತ ವಿವೇಚನೆಯು ಈ ಗ್ರಂಥದಲ್ಲಿ ಬಂದಿದೆ.

ಈ ವಿವೇಚನೆಯಲ್ಲಿ ಬಸವಣ್ಣನವರಿಂದಲೇ ವೀರಶೈವ ಮತವು ಸ್ಥಾಪಿತವಾಯಿತೆಂದು ಅನೇಕರ ಗ್ರಹಿಕೆ ಇದ್ದು ಇದು ಸರಿಯಾದುದಲ್ಲೆಂದು ಡಾ॥ ನಂದೀಮಠರವರು ಸಕಾರಣವಾಗಿ ತೋರಿಸಿದ್ದಾರೆ. ಬಸವೇಶ್ವರನಕಿಂತಲೂ ಮೊದಲು ಅನೇಕ ಶಿವಶರಣರಾಗಿ ಹೋದರೆಂಬುವನ್ನು

ಸಾಧಾರವಾಗಿ ಅವರು ಹೇಳಿದ್ದಾರೆ. ನಾವು ಪ್ರಕಟಿಸಿದ ಶಿವಶರಣರ ಚರಿತ್ರೆಗಳಲ್ಲಿ ಈ ಸಂಗತಿಯನ್ನು ನಾವು ಆಗಿಂದಾಗ್ಗೆ ಲಕ್ಷಿಸುತ್ತಬಂದಿದ್ದೇವೆ. ವೀರಶೈವ ತತ್ವಜ್ಞಾನವನ್ನು ಪರಿಶೋಧಿಸಿದಲ್ಲಿ ಅವುಗಳಲ್ಲಿ ಅತಿ ಪ್ರಾಚೀನ ತತ್ವಗಳು ಅಡಕವಾಗಿರುವದು ಕಂಡು ಬರುತ್ತದೆ. ಕರಣಹಸುಗೆಯು ಇದಕ್ಕೆ ಉದಾಹರಣೆಯಾಗಿದೆ. ಆದುದರಿಂದ ೧೨ ನೇ ಶತಮಾನದಲ್ಲಿ ವೀರಶೈವ ಮತವು ಉದಯಿಸಿತೆಂದು ಹೇಳುವದು ತಪ್ಪು. ಆದರೂ ೧೨ ನೇ ಶತಮಾನದಲ್ಲಿ ಅಸಂಖ್ಯ ಶಿವಶರಣರು ಉಂಟಾಗಿ ಧರ್ಮದಲ್ಲಿ ಅನೇಕ ಮಾರ್ಪಾಡುಗಳನ್ನು ಮಾಡಿರುವದು ನಿಜವು. ಆದರೆ ಇಷ್ಟರಿಂದಲೇ ಬಸವೇಶ್ವರನು ಧರ್ಮಸ್ಥಾಪಕನೆಂದು ತಿಳಿಯುವದು ಸರಿಯಾಗಲಾರದು. ಈ ವಿಷಯುವನ್ನು ಕುರಿತು ಡಾ॥ ನಂದೀಮಠರವರು ಮಾಡಿದ ವಿವೇಚನೆಯನ್ನು ನಾವು ಸಮರ್ಥಿಸುತ್ತೇವೆ.

ಕರ್ನಾಟಕದಲ್ಲಿ ವೈಷ್ಣವ ಮತಗಳೂ ಕೂಡ ಪ್ರಬಲವಾಗಿರುತ್ತವೆ. ಅವುಗಳನ್ನು ಡಾ॥ ನಂದೀಮಠರವರು ಈ ಗ್ರಂಥದಲ್ಲಿ ವಿವೇಚಿಸಿದ್ದಾರೆ. ಅವುಗಳಲ್ಲಿ ಭಾಗವತಪಂಥ, ಪಾಂಚರಾತ್ರ, ಶ್ರೀ ಸಾಂಪ್ರದಾಯ, ರಾಮಾನುಜಾಚಾರ್ಯರ ವಿಶಿಷ್ಟಾದ್ವೈತಮತ, ಮಧ್ವಾಚಾರ್ಯರ ದ್ವೈತಮತ ಇವುಗಳು ಮಹತ್ವವಾದವುಗಳು. ಇವು ಮುಖ್ಯವಾಗಿ ಬ್ರಾಹ್ಮಣರಲ್ಲಿ ಆಯಾಯ ಕಾಲಗಳಲ್ಲಿ ಬಹು ಹೆಚ್ಚಾದ ಆಂದೋಲನಗಳನ್ನುಂಟುಮಾಡಿವೆ. ಮುಂದೆ ಈಚೆಗೆ ದಾಸಪಂಥದಲ್ಲಿ ಅನೇಕ ದಾಸರು ಉದಯವಾದರು. ಇವರು ಬಹುಜನ ಸಮಾಜದಲ್ಲಿ ಮಹತ್ವದ ಪರಿಣಾಮಗಳನ್ನುಂಟುಮಾಡಿದ್ದಾರೆ.

ಈ ಮತಗಳಲ್ಲದೆ ಅದ್ವೈತಮತವು ಕರ್ನಾಟಕದಲ್ಲಿ ಪ್ರಾದುರ್ಭವಿಸಿರುತ್ತದೆ. ಅದರ ಮುಖ್ಯ ತತ್ವಗಳು ಈ ಗ್ರಂಥದಲ್ಲಿ ಉಲ್ಲೇಖಿಸಲ್ಪಟ್ಟವೆ. ಇವಲ್ಲದೆ, ಶಾಕ್ತ, ಗಾಣಪತ್ಯ, ಸ್ಕಾಂದಮತ, ಸೌರಮತ ಇವುಗಳೂ ಕಾಲ ಕಾಲಕ್ಕೆ ಉದಯವಾಗಿರುತ್ತವೆ.

ಕರ್ನಾಟಕದಲ್ಲಿ ಜೈನ ಧರ್ಮವು ಪುರಾತನ ಕಾಲದಿಂದಲೂ ನೆಲಸಿರುತ್ತದೆ. ಅನೇಕ ರಾಜರು ಈ ಮತಾನುಯಾಯಿಗಳಾಗಿದ್ದಾರೆ. ಇದರ ವಿವರಣೆಯು ಮತ್ತು ಜೈನಮತ ತತ್ವಗಳ ನಿರೂಪಣೆಯು ಈ ಗ್ರಂಥದಲ್ಲಿ ಬಂದಿವೆ. ಜೈನಮತದ ತತ್ವಗಳು ಬಹುಜನರಿಗೆ ಬಹುಶಃ

ವಿದಿತವಿರುವದಿಲ್ಲ. ಅವುಗಳ ಸಾಮಾನ್ಯ ತಿಳಿವಳಿಕೆಯು ಎಲ್ಲರಿಗೂ ಇರುವದು ಅವಶ್ಯವು. ಅದರಲ್ಲಿರುವ ಮಹತ್ವದ ತತ್ವಗಳ ವಿವೇಚನೆಯು ಈ ಗ್ರಂಥದಲ್ಲಿ ಬಂದಿದ್ದು ಅದು ಬಹು ಉಪಯುಕ್ತವಾಗಿರುತ್ತದೆ.

ಬೌದ್ಧಧರ್ಮ, ಕ್ರಿಸ್ತೀಧರ್ಮ ಮತ್ತು ಇಸ್ಲಾಂಧರ್ಮ ಈ ಧರ್ಮಗಳು ಕರ್ನಾಟಕದಲ್ಲಿವೆ. ಇವು ಪೃಥ್ವಿಯಲ್ಲಿಯ ಧರ್ಮಗಳಲ್ಲಿ ಬಹು ಮಹತ್ವವಾದವುಗಳು. ಆದರೆ ಅವುಗಳ ತತ್ವಗಳ ಪರಿಚಯವು ಬಹು ಜನರಿಗೆ ಇರುವದಿಲ್ಲ. ಅವುಗಳ ವಿಷಯವಾಗಿ ತಪ್ಪು ಗ್ರಹಿಕೆಗಳು ಇರುವದೇ ಹೆಚ್ಚು. ಅವು ಹೆಚ್ಚಾಗಿ ರೂಢವಾಗಿದ್ದ ದೇಶಗಳಲ್ಲಿ ಜನತೆಯ ಮೇಲೆ ಮಹತ್ತರ ಪರಿಣಾಮಗಳನ್ನುಂಟು ಮಾಡಿವೆ. ಇಂಥ ಧರ್ಮಗಳಲ್ಲಿರುವ ತತ್ವಗಳ ಸಾಮಾನ್ಯ ಜ್ಞಾನವು ಎಲ್ಲರಿಗಿರುವದು ಬಹು ಅವಶ್ಯವಾದದ್ದು. ಡಾ॥ ನಂದಿಮಠದವರು ಇವುಗಳ ವಿವೇಚನೆಯನ್ನು ಈ ಗ್ರಂಥದಲ್ಲಿ ಮಾಡಿದ್ದಾರೆ.

ಈಪ್ರಕಾರ ಗ್ರಂಥಕರ್ತರು ಕರ್ನಾಟಕದಲ್ಲಿ ಬಹು ಪ್ರಾಚೀನ ಕಾಲದಿಂದ ಉದ್ಭವಿಸುತ್ತ ಬಂದ ಮತಗಳ ವಿವೇಚನೆಯನ್ನು ಸಾಕಷ್ಟು ವಿಸ್ತಾರವಾಗಿಯೂ ಸ್ಫುಟವಾಗಿಯೂ ಮಾಡಿದ್ದಾರೆ. ಈ ಮತಗಳ ಪರಿಣಾಮಗಳು ಕರ್ನಾಟಕದ ಜನತೆಯ ಮೇಲೆ ಉಂಟಾಗದೆ ಇರುವದಿಲ್ಲ. ಅವುಗಳ ಪರಸ್ಪರ ಬೆರಿಕೆಯು ವಿಂಗಡಿಸಲು ಬಾರದಷ್ಟು ಆಗಿದೆಂದು ಡಾ॥ ನಂದಿಮಠರವರು ಅಭಿಪ್ರಾಯಪಟ್ಟಿದ್ದರಲ್ಲಿ ಸತ್ಯಾಂಶವಿದೆ. ಬೇರೆ ಬೇರೆ ಧರ್ಮಗಳ ಅನುಯಾಯಿಗಳು ಕಾಲಕಾಲಕ್ಕೆ ಕರ್ನಾಟಕದಲ್ಲಿ ಬಂದು ಇಲ್ಲಿ ನೆಲಿಸಿ ಇಲ್ಲಿಯ ಜನರಲ್ಲಿ ಬೆರೆತುಕೊಂಡಿರುತ್ತಾರೆ. ಇದರಿಂದ ಅವರ ಆಚಾರವಿಚಾರಗಳಲ್ಲಿ ಮಾರ್ಪಾಡುಗಳು ಸಹ ಆಗಿರುತ್ತವೆ. ಈ ಕಾರಣದ ಮೂಲಕ ನಮ್ಮ ಪ್ರಾಂತದಲ್ಲಿ ಪರಧರ್ಮ ಸಹಿಷ್ಣುತಾ ಭಾವವು ಎಲ್ಲಕ್ಕೂ ಹೆಚ್ಚಿಗಿರುತ್ತದೆ. ವೈದಿಕ ಮತಾನುಯಾಯಿಗಳಾದ ರಾಜರು ಜೈನ ಧರ್ಮಾನುಯಾಯಿಗಳಿಗೂ, ಜೈನ ಧರ್ಮಾನುಯಾಯಿಗಳಾದ ರಾಜರು ವೈದಿಕ ಮತಾನುಯಾಯಿಗಳಿಗೂ ದಾನಧರ್ಮಗಳನ್ನು ಮಾಡುತ್ತ ಬಂದಿರುವದು ತೋರಿಬರುತ್ತಿದೆ. ಶಿವ, ಧಾತೃ, ಸುಗತ, ವಿಷ್ಣು, ಜಿನ ಇವರೆಲ್ಲರೂ ಒಬ್ಬನೇ ದೇವರ ಬೇರೆ ಬೇರೆ ಹೆಸರುಗಳೆಂಬ ಭಾವವು ಕೈದಾಳದ ಶಾಸನದಲ್ಲಿ ಧ್ವನಿತವಾಗಿದೆ. ಬೇಲೂರು ಚನ್ನಕೇಶವ ದೇವಾಲಯದಲ್ಲಿಯ ಒಂದು ಶಾಸನ

ದಲ್ಲಿ ಇದೇ ಭಾವವು ವ್ಯಕ್ತವಾಗಿದೆ. ಹರಿಹರರಲ್ಲಿ ಭೇದವಿಲ್ಲೆಂದು ಹರಿಹರೇಶ್ವರ ದೇವಾಲಯುದಲ್ಲಿಯ ಹರಿಹರರ ಸಂಯುಕ್ತ ವಿಗ್ರಹವೇ ಒಂದು ಹೆಗ್ಗುರುತಾಗಿದೆ. ಇದು ಇಲ್ಲಿಯ ಹಿಂದೂ ಮುಹಮ್ಮದೀಯು ರಲ್ಲಿಯೂ ಕೂಡ ತೋರಿಬರುತ್ತದೆ. ವಿಜಾಪುರ ಬಾದಶಹರ ಕಾಲ ದಲ್ಲಿ ಹೀಗಾದುದರ ಉದಾಹರಣೆಗಳು ಅನೇಕವಿರುತ್ತವೆ. ಈ ಎಲ್ಲ ಸಂಗತಿಗಳು ಹಿಂದೀ ಜನಾಂಗವು ಒಂದೇ ಎಂಬುದನ್ನು ದೃಢಪಡಿಸು ತ್ತವೆ.

ಈಪ್ರಕಾರ ಈ ಗ್ರಂಥದಲ್ಲಿ ಸವಿಸ್ತಾರವಾದ ಮತವಿವೇಚನೆಯು ಇದ್ದು ಇದು ಬಹು ಉಪಯುಕ್ತ ಗ್ರಂಥವಾಗಿರುತ್ತದೆ.

---

## ಶಿವಾನುಭವ ಪತ್ರಿಕೆಗೆ ಸಹಾಯ.

ಕೆಳಗೆ ಕಾಣಿಸಿದ ಮಹನೀಯರು ಶಿವಾನುಭವ ಪತ್ರಿಕೆಯು ಈ ವರೆಗೆ ಮಾಡುತ್ತ ಬಂದ ಸೇವೆಯನ್ನು ಲಕ್ಷಿಸಿ ಈಗಿನ ಕಠಿಣ ಪರಿ ಸ್ಥಿತಿಯಲ್ಲಿ ಅದಕ್ಕೆ ಸಹಾಯಧನವನ್ನು ಸಲ್ಲಿಸಿದ್ದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ. ಈ ಕಾಲದಲ್ಲಿ ಅವರಿಂದ ಅದಕ್ಕೆ ದೊರಕಿದ ಇಂಥ ಸಹಾಯಧನದ ಮಹತ್ವವು ಅಪಾರವಾಗಿರುತ್ತದೆಂದು ನಾವು ಇಲ್ಲಿ ವಿವರಿಸದಿರಲಾರೆವು.

ಫ. ಗು. ಹಳಕಟ್ಟಿ.
ಸಂಪಾದಕ.

ರೂ.

(೧) ಶ್ರೀ ಮೃತ್ಯುಂಜಯ ಸ್ವಾಮಿಗಳುಹಾವೇರಿ ಪೇಟೆ–ಧಾರವಾಡ. ೨೫

(೨) ಶ್ರೀ ಸಂಗಮನಾಥ ಸ್ವಾಮಿಗಳು ವಿರಕ್ತಮಠ
ಮು. ಬಿಲ್ಲಹಳ್ಳಿ ತಾ॥ ಚನ್ನಗಿರಿ ಜಿ. ಶಿವಮೊಗ್ಗೆ ೨೫

(೩) ಮ. ರಾ. ರಾ. ಬಿ. ಲಿಂಗಯ್ಯನವರು ವಿಶ್ವೇಶ್ವರಪುರ
ಬೆಂಗಳೂರು ಸಿಟಿ ೪೦

---

ಇನ್ನು ಮೂವತ್ತಾರು ತತ್ವ ಉತ್ಪತ್ಯವೆಂತೆಂದಡೆ, ಪರಶಿವತತ್ವ, ತಾನೆ ತನ್ನ ಲೀಲಾ ವಿನೋದಕ್ಕೆ ನಿಃಕಲ ತತ್ವವಾಯಿತ್ತು. ಆ ನಿಃಕಲ ತತ್ವದಲ್ಲಿ ದಶತತ್ವ ಉತ್ಪತ್ಯವೆಂತೆಂದಡೆ, ಪರಾಶಕ್ತಿ, ಸದಾಶಿವ, ಈಶ್ವರ, ಶುದ್ಧ ವಿದ್ಯಾ, ಮಾಯೆ, ನಿಯತಿ, ಕಲೆ, ವಿದ್ಯಾ, ರಾಗ, ಈ ದಶತತ್ವಂಗಳು ನಿಃಕಲ ತತ್ವದಲ್ಲಿ ಉತ್ಪತ್ಯವಾಯಿತ್ತು. ಇನ್ನು ಸಕಲ ತತ್ವದಲ್ಲಿ ಇಪ್ಪತ್ತು ನಾಲ್ಕು ತತ್ವ ಉತ್ಪತ್ಯವದೆಂತೆಂದಡೆ ಗುಣತ್ರಯ, ಬುದ್ಧಿ, ಅಹಂಕಾರ, ಚಿತ್ತ, ಶ್ರೋತ್ರ, ಚಕ್ಷು: ಜಿಹ್ವೆ, ಘ್ರಾಣ, ವಾಕ್ಕು, ಪಾಣಿ, ಪಾದ, ಪಾಯು, ಗುಹ್ಯ, ಶಬ್ದ, ಸ್ಪರ್ಶ, ರೂಪು, ರಸ, ಗಂಧ, ಆಕಾಶ, ವಾಯು, ತೇಜ, ಅಪ್ಪು, ಪೃಥ್ವಿ, ಇಪ್ಪತ್ತು ನಾಲ್ಕು ತತ್ವಂಗಳು ಸಕಲ ತತ್ವದಲ್ಲಿ ಉತ್ಪತ್ಯವಾಯಿತ್ತು. ಆ ಸಕಲ ನಿಃಕಲತತ್ವ ಮೊದಲಾಗಿ ರಾಗ, ಪ್ರಥ್ವಿತತ್ವ ಕಡೆಯಾಗಿ, ಈ ಮೂವತ್ತಾರು ತತ್ವವು ತತ್ವಾಧ್ವ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೮೯. ಇನ್ನು ಷಷ್ಠಕಲೆಗಳುತ್ಪತ್ಯವದೆಂತೆಂದಡೆ, ಅಖಂಡಜ್ಯೋತಿರ್ಮಯವಾಗಿಹ, ಗೋಳಕಾಕಾರ ಪ್ರಣವದ ಜ್ಯೋತಿಸ್ವರೂಪದಲ್ಲಿ ಪ್ರತಿಷ್ಠೆ, ಶಾಂತ್ಯತೀತೋತ್ತರ ಕಲೆ ಉತ್ಪತ್ಯ. ಆ ಪ್ರಣವದ ದರ್ಪಣಾಕಾರದಲ್ಲಿ ಶಾಂತ್ಯತೀತೆ ಕಲೆ ಉತ್ಪತ್ಯ, ಆ ಪ್ರಣವದ ಅರ್ಧಚಂದ್ರಕದಲ್ಲಿ ಶಾಂತಿ ಕಲೆ ಉತ್ಪತ್ಯ, ಆ ಪ್ರಣವದ ಕುಂಡಲಾಕಾರದಲ್ಲಿ ವಿದ್ಯಾ ಕಲೆ ಉತ್ಪತ್ಯ. ಆ ಪ್ರಣವದ ದಂಡಸ್ವರೂಪದಲ್ಲಿ ಪ್ರತಿಷ್ಠೆ ಕಲೆ ಉತ್ಪತ್ಯ. ಆ ಪ್ರಣವದ ತಾರಕಾ ಸ್ವರೂಪದಲ್ಲಿ ನಿವೃತ್ತಿ ಕಲೆ ಉತ್ಪತ್ಯ, ಅಂತು ಷಷ್ಠಕಲಾನಾಮಂಗಳು ಕಲಾಧ್ವ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೯೦, ಇನ್ನು ಷಡಧ್ವವರ್ತನೆ ಅದೆಂತೆಂದಡೆ, ಆಧಾರ ಚಕ್ರದ ಚತುರ್ದಳ ಪದ್ಮದ ಮಧ್ಯದಲ್ಲಿಹ, ಮಂತ್ರ ಸದ್ಯೋಜಾತ ಮಂತ್ರದಲ್ಲಿಹ, ಪದವ್ಯೋಮ ವ್ಯಾಪಿ. ವ್ಯೋಮರೂಪಾಯ ಸರ್ವವ್ಯಾಪಿನೆ ಶಿವಾಯವೆಂಬ ನಾಲ್ಕುಪದ. ಅಲ್ಲಿಹ ವರ್ಣ ವಶಷಸಯೆಂಬ ನಾಲ್ಕು ವರ್ಣ. ಅಲ್ಲಿಹ ಭುವನ ಅನಾಶ್ರಿತ, ಅನಾದ, ಅನಂತ, ವ್ಯೋಮರೂಪ, ವ್ಯೋಮಿನಿ, ಊರ್ಧ್ವಗಾಮಿನಿ ಮೋಚಿಕಾ, ದೀಪಿಕೊದೀಪ, ಶಾಂತ್ಯತೀತ ಶಾಂತಿ ವಿದ್ಯಾ ಪ್ರತಿಷ್ಠೆ ನಿವೃತ್ತಿ, ಸದಾಶಿವ, ಅಚಿಂತ್ಯವೆಂಬ ಹದಿನಾರು ಭುವನ, ಅಲ್ಲಿಹ ತತ್ವ ಪೃಥ್ವಿ ಅಪ್ಪು ತೇಜ ವಾಯು ಆಕಾಶವೆಂಬ ಪಂಚತತ್ವ, ಅಲ್ಲಿಹ ಕಲೆ ನೋಡಾ ಅಪ್ರಮಾಣ ಕೂಡಲಸಂಗಮದೇವ.

೩೯೧. ಅಲ್ಲಿಂದ ಮೇಲೆ ಸ್ವಾಧಿಷ್ಠಾನ ಚಕ್ರದ ಷಡುದಳ ಪದ್ಮದ ಮಧ್ಯದಲ್ಲಿಹ ಮಂತ್ರ, ವಾಮದೇವ ಮಂತ್ರ, ಅಲ್ಲಿಹ, ಈಶಾನ ಮೂರ್ಧಯೆ ತತ್ಪುರುಷ ವಕ್ತ್ರಾಯ ಅಘೋರ ಹೃದಯಾಯ, ವಾಮದೇವ ಗುಹ್ಯಾಯ ಸದ್ಯೋಜಾತ ಮೂರ್ತಯೆ, ಓಂ ನಮೊ ನಮಃ ಎಂಬ ಆರುಪದ; ಅಲ್ಲಿ ವರ್ಣ ಬಭಮಯರಲ್ಲಿ ಎಂಬ ಆರು ವರ್ಣ, ಅಲ್ಲಿಹ ಭುವನ ಸೂಕ್ಷ್ಮ ವಾಮದೇವ ಸತ್ಯಾನಂದ ಸರ್ವೇಶ್ವರ, ಶಿವೋತ್ತಮ, ನಿತ್ಯಾನಂದ ಏಕ ನೇತ್ರ, ಸದಾನಂದ, ಏಕರುದ್ರ, ಸಿಜಾನಂದ ತ್ರಿಮೂರ್ತಿ ಶ್ರೀಕಂಠ,. ಶಿಖಂಡಿ, ವಾಮಜ್ಯೇಷ್ಠ, ರೌದ್ರಿ, ಕಲವಿಕರಿಣಿ, ಕಾಳಿ, ಬಲವಿಕರಿಣಿ, ಸರ್ವಭೂತ ದಮನಿ, ಬಲಪ್ರಮಥಿನಿ, ಮನೋನ್ಮನಿ, ಅಂಗುಷ್ಠ ಮಾತ್ರ ಭುವನ ಮಹಾಭುವನ, ಯೆಕಾಶನ ಎಂಬ ಇಪ್ಪತ್ತುನಾಲ್ಕು ಭುವನ. ಅಲ್ಲಿಹ ತತ್ವ ಶಬ್ದ, ಸ್ಪರ್ಶ, ರೂಪು, ರಸ ಗಂಧ ಎಂಬ ಪಂಚ ತತ್ವ. ಅಲ್ಲಿಹ ಕಲೆ ಪ್ರತಿಷ್ಠೆಕಲೆ ನೋಡಾ। ಅಪ್ರಮಾಣ ಕೂಡಲಸಂಗಮದೇವಾ,

೩೯೨. ಅಲ್ಲಿಂದ ಮೇಲೆ ಮಣಿಪೂರಕ ಚಕ್ರ, ದಶದಳಪದ್ಮ, ಆ ಪದ್ಮದ ಮಧ್ಯದಲ್ಲಿಹ ಮಂತ್ರ ಅಘೋರಮಂತ್ರ, ಅಲ್ಲಿಹ ಪದ ಗುಹ್ಯಾತಿ ಗುಹ್ಯಾಯ ಗೋಪ್ತ್ರಿ ಅನಿಧಾನಾಯ ಸರ್ವ ಯೋಗಾಧಿಕೃತಯೆ ಜ್ಯೋತಿ ರೂಪಾಯ, ಪರಮೇಶ್ವರ ಪರಾಯ ಚೇತನ ಅಚೇತನ ವಶಾಮಿನ್ ಎಂಬ ಎಂಟು ಪದ. ಅಲ್ಲಿಹ ವರ್ಣ ಡ ಢ ಣ ತ ಥ ದ ಧ ನ ಪ ಫ ಎಂಬ ಹತ್ತು ವರ್ಣ. ಅಲ್ಲಿಯ ಭುವನ ಏಕ ಪಿಂಗಳೇಕ್ಷಣ, ಉದ್ಭವ, ಭವ, ವಾಮದೇವ, ಮಹಾದೇವ ಶಿಭೇದ ಏಕವೀರ ಪಂಚಾಂತಕ ಶೂರ ಸಂವ ರ್ತಸ ಜ್ಯೋತಿ ಚಂಡ ಕ್ರೋಧಿ ಅನಂತ ಏಕ ಏಕ ಭವ್ಯ ಮಂಗಳ ಅಜ ಉಮಾಪತಿ ಏಕಧೀರ ಪ್ರಚಂಡ ಈಶಾನ್ಯ ಉಗ್ರ ಭೀಮ ಭೀಮ ಕೌಮಾರಿ ವೈಷ್ಣವ ಬ್ರಾಹ್ಮಣ ವೈಶ್ಯ ಶೈವ ಅಕೃತ ಯಾಮ್ಯ ಪ್ರಜೇಶ ಸೌಮ್ಯ ಇಂದ್ರ ಗಾಂಧರ್ವ ಯಕ್ಷ ರಾಕ್ಷಸ ಪೈಶಾಚಿಕವೆಂಬ ನಾಲ್ವತ್ತು ಭುವನ. ಅಲ್ಲಿಯ ತತ್ವ ವಾಕ್ಕು ಪಾಣಿ ಪಾದ ಪಾಯು ಗುಹ್ಯ ಎಂಬ ಪಂಚ ತತ್ವ ಅಲ್ಲಿಹ ಕಲೆ ವಿದ್ಯಾ ಕಲೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೯೩. ಅಲ್ಲಿಂದ ಮೇಲೆ ಅನಾಹತ ಚಕ್ರದ ದ್ವಾದಶದಳ ಪದ್ಮ, ಪದ್ಮದ ಮಧ್ಯದಲ್ಲಿಹ ಮಂತ್ರ ತತ್ಪುರುಷ ಮಂತ್ರ. ಅಲ್ಲಿಹ ಪದ ವ್ಯಾಪಿನ್, ಅರೂಪಿನ್ ನಿರೂಪಿನ್ ಪ್ರಥಮ ಪ್ರಥಮ ತೇಜಸ್ತೇ ತೇಜ

ವೀರಶೈವರು ಮತ್ತು
ಕನ್ನಡಿಗರು ಅವಶ್ಯವಾಗಿ ಸಂಗ್ರಹಿಸಬೇಕಾದ

ಇದೀಗ ಹೊರಬಿದ್ದ

**ಬೆಲೆಯುಳ್ಳ ಗ್ರಂಥ.**

---

# ಶಿವಶರಣರ ಚರಿತ್ರೆಗಳು.

---

ಬರೆದವರು

**ರಾ॥ ಬ॥ ಫ ಗು. ಹಳಕಟ್ಟಿ**

---

**ಬೆಲೆ ೧ ರೂ. ೧೨ ಆ.**

ವ್ಯಾನೇಜರ---"**ಶಿವಾನುಭವ**" ವಿಜಾಪುರ

R. N. B. 2554

**BOOK-POST.**

ಶ್ರೀ. ರಾ|| ರಾ||

*From,*
**Shivanubhava Office Bijapur.**


ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ|| ಬಾ|| ಪು. ಜ. ಮಧ್ಯ ಎ. ಎಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ ಅರೋಪಿನ್ [illegible] ಪ್ರೆಸ್ಸಿನಲ್ಲಿ ಮುದ್ರಿಸಿ ವಿಜಾಪುರದಲ್ಲಿ ತಮ್ಮಲ್ಲಿ ಪ್ರಸಿದ್ಧಿಸಿದರು.




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.
ವಾರ್ಷಿಕ ವರ್ಗಣಿ ಅಂಚೆವೆಚ್ಚ ಸಹಿತ ರೂ. -೪-೦ ವ್ಹಿ. ಪಿ. ಖರ್ಚು ೦-೪-೦

ಸಂಪುಟ ೧೯ ] ಜನವರಿ ೧೯೪೫. [ ಸಂಚಿಕೆ ೪

## ವಿಷಯಾನುಕ್ರಮಣಿಕೆ.

# ಶಿವಾನುಭವ

| ವರ್ಷ ೧೯ | ಜನವರಿ ೧೯೪೫. | ಸಂಚಿಕೆ ೪ |
|---|---|---|

## ಕಾಯಕವೇ ಕೈಲಾಸ.

( ಲೇಖಕಃ— ವಿದ್ವಾನ್ ಸಿದ್ಧವೀರಶಾಸ್ತ್ರಿ ಕಾವ್ಯತೀರ್ಥ ಹಿರೇವಡವಟ್ಟಿ
ಶಂಕರ ಸಂಸ್ಕೃತ ಕಾಲೇಜ ಯಾದಗಿರಿ. )

ಕಾಯಕವೆಂದರೆ ಕರ್ಮ, ಕೆಲಸವೆಂದು ಅರ್ಥವಾಗುತ್ತದೆ. “ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ” ಎಂಬಂತೆ ಪ್ರತಿಯೊಬ್ಬನು ಕೆಲಸ ಮಾಡಿದರೇನೇ ಸಂಪತ್ತನ್ನೂ ಕೀರ್ತಿಯನ್ನೂ ದೊರಕಿಸುತ್ತಾನೆ. ಇದನ್ನೇ ಭಗವದ್ಗೀತೆಯಲ್ಲಿ ಕೃಷ್ಣಪರಮಾತ್ಮನು “ಕರ್ಮಯೋಗ” ವೆಂದು ಹೇಳಿದ್ದಾನೆ. ಯಾರು ಫಲಾಪೇಕ್ಷೆಯಿಲ್ಲದೆ ಕಾರ್ಯ ಮಾಡುವರೋ ಅವರೇ ನನಗೆ ಪ್ರಿಯಕರರೆಂದು ಅವನು ಹೇಳಿದ್ದಾನೆ. ಅಂದರೆ ದೇವರು ಕಾಯಕ ಪ್ರಿಯನೆಂದು ತಿಳಿಯಿತು.

### ಕಾಯಕವನ್ನು ಏಕೆ ಮಾಡಬೇಕು ?

ಸಕಲ ಚರಾಚರಾತ್ಮಕವಾದ ಜಗತ್ತನ್ನೂ, ಸರ್ವ ಜೀವರಾಶಿಗಳನ್ನೂ ನಿರ್ಮಿಸಿದ ಕರ್ತೃವಿಗೆ ಮನುಷ್ಯನು ಕಾಯಕ ಮಾಡಬೇಕೆಂಬ ಉದ್ದೇಶವಿದೆ. ವಿಚಾರಿಸಿ ನೋಡಿರಿ. ಬಲವಾದ ವ್ಯಾಘ್ರಾದಿಗಳಿಗೆ ದುರ್ಬಲ ಪ್ರಾಣಿಗಳನ್ನೂ, ದೊಡ್ಡ ಪಕ್ಷಿಗಳ ಸಲುವಾಗಿ ಕ್ರಿಮಿಕೀಟಕಗಳನ್ನೂ, ದನಕರುಗಳಿಗೆ ಹುಲ್ಲು ಮೊದಲಾದ ಆಹಾರಗಳನ್ನೂ ನಿರ್ಮಿಸಿರುವಂತೆ ಮನುಷ್ಯನ ಜೀವನಕ್ಕೆ ಬೇಕಾದ ಸಕಲ ಭೋಗ್ಯವಸ್ತುಗಳನ್ನು ಸಿದ್ಧವಾದವುಗಳನ್ನು ಮಾಡಲಿಕ್ಕೆ ಬರುತ್ತಿದ್ದಿಲ್ಲವೇ? ಬರುತ್ತಿತ್ತು. ಆದರೆ ಈ ಪ್ರಾಣಿಯು ಸರ್ವ ಪ್ರಾಣಿಗಳಿಗಿಂತಲೂ ಶ್ರೇಷ್ಠವಾದದ್ದೂ,

ಕಾರ್ಯಾಕಾರ್ಯ ಜ್ಞಾನವುಳ್ಳದ್ದೂ ಇರುತ್ತದೆ. ತನ್ನ ಆಹಾರವನ್ನೂ ತಾನೇ ಮಾಡಿಕೊಳ್ಳಲೆಂಬ ಉದ್ದೇಶದಿಂದ ಇದನ್ನು ಬಿಟ್ಟಿರುತ್ತಾನೆ. ಸುಭಾಷಿತವು ಹೀಗೆ ಇರುತ್ತದೆ

"ಆಹಾರ ನಿದ್ರಾಭಯ ಮೈಥುನಂ ಚ । ಸಮಾನಮೇತತ್ಪಶುಭಿರ್ನರಾಣಾಂ ॥ ಆಚಾರಮಸ್ಯಧಿಕೋನರಾಣಾ । ಮಾಚಾರ ಹೀನಃ ಪಶುಭಿಸ್ಸಮಾನಃ ॥

ಎನ್ನುವಂತೆ ಆಚಾರವೆಂದರೆ ಕಾರ್ಯಾಕಾರ್ಯ ಜ್ಞಾನದಿಂದ ಸತ್ಕರ್ಮಮಾಡುವದೆಂದರ್ಥ. ಇಲ್ಲದಿದ್ದರೆ ದ್ವಿಪಾದ ಪಶುವೆನ್ನಲು ಅಡ್ಡಿ ಇಲ್ಲ. ಇದೇ ವಿಷಯದಲ್ಲಿ ಭಗವದ್ಗೀತೆಯಲ್ಲಿ

"ಕರ್ಮಣ್ಯೇವಾಧಿಕಾರಸ್ತೇಮಾ ಫಲೇಷುಕದಾಚನ ಮಾ ಕರ್ಮಫಲ ಹೇತುರ್ಭೂರ್ಮಾತೆ ಸಂಗೋಸ್ತ್ವಕರ್ಮಣಿ" ಎಂಬುದಾಗಿ ಕರ್ಮದ ಮಹತ್ವವನ್ನು ಪ್ರತಿಪಾದಿಸಿದ್ದಾನೆ. ಆದ್ದರಿಂದ ಮನುಷ್ಯನು ಅತ್ಯವಶ್ಯವಾಗಿ ಕರ್ಮವನ್ನು ಮಾಡಲೇಬೇಕು.

## ಕಾಯಕವು ಹೇಗಿರಬೇಕು ?

ಕಾಯಕವು ತ್ರಿಕರಣ ಶುದ್ಧವಾದದ್ದೂ, ಸದಾಚಾರನಿರತವಾದದ್ದೂ, ಪರೋಪಕಾರಯುಕ್ತವಾದದ್ದೂ ಇರಬೇಕು. ಈ ವಿಷಯಕ್ಕೆ ಗೀತೆಯಲ್ಲಿ "ಕರ್ಮಣ್ಯೇವ ಸಂಸಿದ್ಧಿಮಾಸ್ಥಿತಾ: ಜನಕಾದಯಃ" ಎಂಬುದಾಗಿ ಹೇಳಿರುವದು. ವೈರಾಗ್ಯಶಿರೋಮಣಿ ಶಿವಶರಣೆ ಅಕ್ಕಮಹಾದೇವಿಯು ಕರ್ತವ್ಯವು ತ್ರಿಕರಣ ಶುದ್ಧವಾಗಿರಬೇಕು ಎಂಬುವದನ್ನು ಕೆಳಗಿನಂತೆ ಹೇಳಿದ್ದಾಳೆ.

ವಚನಃ—ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯಾ ನೀನು. ಮನಕರಗದವರಲ್ಲಿ ಪುಷ್ಪವನೊಲ್ಲೆಯಯ್ಯಾ ನೀನು. ಹದುಳಿಗರಿಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯಾ ನೀನು. ಅರಿವು ಕಣ್ತೆರೆಯದವರಲ್ಲಿ ಆರತಿಯನೊಲ್ಲೆಯಯ್ಯಾ ನೀನು. ಭಾವಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯಾ ನೀನು. ಹೃದಯ ಕಮಳವರಳದವರಲ್ಲಿ ಇರಲೊಲ್ಲೆಯಯ್ಯಾ ನೀನು. ಎನ್ನಲ್ಲಿ ನೀನುಂಟೆಂದು ಕರಸ್ಥಲವ ನಿಂಬುಗೊಂಡೆ ಹೇಳಾ ಚನ್ನಮಲ್ಲಿಕಾರ್ಜುನಾ.

ಎಂದು ಅತಿ ವಿರಳವಾಗಿ ಸರ್ವರಿಗೂ ತಿಳಿಯುವಂತೆ ಹೇಳಿದ್ದಾಳೆ. ಇದಲ್ಲದೆ ಕಾಯಕವು ಪರೋಪಕಾರ ನಿರತವಾಗಿರಬೇಕು, ಎಂಬುವ ಬಗ್ಗೆ ಗೀತೆಯಲ್ಲಿ ಹೇಳಿರುವದೇನೆಂದರೆ —

"ಯಜ್ಞಶಿಷ್ಟಾಶಿನಃ ಸಂತೋ । ಮುಚ್ಯಂತೇ ಸರ್ವಕಿಲ್ಬಿಷೈಃ ಭುಂಜಂತೆ ತೇತ್ವಘಂಪಾಪಾ । ಯೆಪಚ್ಯಂತ್ಯಾತ್ಮಕಾರಣಾತ್" ಎಂದರೆ ಪ್ರತಿಯೊಂದು ಕಾಯಕವು ಪರಹಿತನಿರತವಾಗದಿದ್ದರೆ ಪಾಪವನ್ನುಂಟುಮಾಡುತ್ತದೆ. ಆದ್ದರಿಂದ ಕಾಯಕವು ಪರೋಪಕಾರನಿಷ್ಠವಾಗಿರಬೇಕು.

## ಕಾಯಕದಲ್ಲಿಯ ನಿಷ್ಠತೆಯು.

ಸಮಸ್ತ ಸೃಷ್ಟಿಗೆ ಕಾಯಕವೇ ಮೂಲ ಆಧಾರವೆಂದು ಖಂಡಿತವಾಗಿ ಹೇಳಬಹುದು. ಕರ್ಮವಿಲ್ಲದೆ ಯಾವ ಪ್ರಾಣಿಯೂ ಬದುಕಲಾರದು, ಯಾವ ಸೃಷ್ಟಿಯೂ ಆಗಲಾರದು. ಸ್ವಾಭಾವಿಕವಾಗಿ ಸಿದ್ಧವಾಗಿದ್ದ ಆಹಾರಸಾಮಗ್ರಿಗಳನ್ನು ವ್ಯಾಘ್ರಾದಿಗಳು ಹುಡುಕವೇ ಕುಳಿತಲ್ಲಿ ಕುಳಿತರೆ ಸಿಗುವದೇ? ಎಂದೂ ಸಿಗಲಾರದು. ಸರ್ವಕ್ಕೂ ಕರ್ಮಕಾರಣವೆಂಬುದನ್ನು ಗೀತೆಯು ಹೇಳುತ್ತದೆ.

"ಅನ್ನಾದ್ಭವತಿ ಭೂತಾನಿ । ಪರ್ಜನ್ಯಾದನ್ನಸಂಭವಃ ॥
ಯಜ್ಞಾದ್ಭವತಿಪರ್ಜನ್ಯೋ । ಯಜ್ಞಕರ್ಮ ಸಮುದ್ಭವಃ ॥

ಅಂದಮೇಲೆ ಸಕಲಕ್ಕೂ ಕಾರಣವಾದ ಕರ್ತವ್ಯದಲ್ಲಿ ದೃಢವಾದ ನಿಷ್ಠೆಯಿಂದ ಎಷ್ಟು ವಿಘ್ನ ಬಂದರೂ ಎದುರಿಸುತ್ತ ಮಾಡಲೇಬೇಕೆಂಬುದಾಗಿ ಶರಣರು ಹೇಳುತ್ತಾರೆ. ಬಸವೇಶ್ವರರು—"ಕಾಯದ ಕಳವಳಕ್ಕಂಜಿ ಈಯಯ್ಯಾ ಎನ್ನೆನು. ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು. ಯದ್ಭಾವಂ ತದ್ಭವತಿ, ಉಂಬರಲಿ, ಸಿಡಿಬರಲಿ, ಬೇಕು ಬೆಡೆನ್ನನಯ್ಯಾ ಆನು ನಿಮ್ಮ ಹಾರೆನು. ಮಾನವರ ಬೇಡೆನು. ಆಣೆ ನಿಮಾಣೆಯುಯ್ಯಾ. ಕೂಡಲಸಂಗಮದೇವ ಕಾಯಕವೇ ಕೈಲಾಸವು"

ಅಕ್ಕನೂ ಕೂಡಾ ಹೇಳಿರುವದೇನೆಂದರೆ— "ಕಿಡಿಕಿಡಿ ಕೆದರಿದರೆ ಎನಗೆ ಹಸಿವು ತೃಷೆಯಡಗಿತೆಂಬೆನಯ್ಯಾ. ಮುಗಿಲು ಹರಿದು ಬಿದ್ದರೆ ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದರೆ ಎನ್ನಗೆ ಪುಷ್ಪವೆಂಬೆನು. ಚನ್ನಮಲ್ಲಿಕಾರ್ಜುನಾ ಶಿರಹರಿದುಬಿದ್ದರೆ, ಎನ್ನ ಪ್ರಾಣ ನಿನಗರ್ಪಿಸುವೆನು."

ಎಂದು ಕರ್ತವ್ಯನಿಷ್ಠತೆಯಿಂದ ಹೇಳಿದ್ದಾಳೆ. ಅಂದಮೇಲೆ ಎಂಥ ಕಠಿಣ ಪ್ರಸಂಗಬಂದರೂ ಕರ್ತವ್ಯವನ್ನು ಬಿಡಬಾರದು.

## ಕಾಯಕವೂ ಶರಣರೂ.

೮೦೦ ವರ್ಷಗಳ ಕೆಳಗೆ ಕಲ್ಯಾಣಪಟ್ಟಣದಲ್ಲಿ ಶರಣರು ಅನುಭವ ಮಂಟಪವನ್ನು ಸ್ಥಾಪಿಸಿ ಅನೇಕ ಮಹತ್ವದ ವಿಷಯಗಳ ಚರ್ಚೆಮಾಡಿದರು. ಅವುಗಳಲ್ಲಿ "ನುಡಿದಂತೆ ನಡೆ, ಇದೇ ಜನ್ಮಕಡೆ" ಎಂಬುವದನ್ನು ಆಚರಣೆಯಲ್ಲಿ ತಂದು ಒಂದು ಕ್ರಾಂತಿಯನ್ನೇ ಹೂಡಿದರು. ಅವರಲ್ಲಿ ಶ್ರೀಬಸವಣ್ಣನವರೇ ಅಗ್ರೇಸರರು. ಇವರ ಪ್ರಭಾವವು ಹಿಂದುಸ್ತಾನದಲ್ಲಿ ಕಾಶ್ಮೀರದಿಂದ ರಾಮೇಶ್ವರದ ವರೆಗೆ ಹಬ್ಬಿ ಕೆಲವು ರಾಜರೂ ಕೂಡಾ ಇವರಲ್ಲಿ ಕೂಡಿಕೊಂಡು ಕಾಯಕದ ಮಹತ್ವವನ್ನು ಪಸರಿಸಿದರು. ಮೋಳಿಗೆಯ ಮಾರಯ್ಯ, ಮಡಿವಾಳಮಾಚರಸ, ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ನುಲಿಯಚಂದಯ್ಯ, ಹಡಪದಪ್ಪಣ್ಣ ಮೊದಲಾದ ಅಸಂಖ್ಯಾತ ಶರಣರು ಇದ್ದರು. ಅವರವರ ಹೆಸರುಗಳಿಂದಲೇ ಕಾಯಕಗಳು ಗೋಚರವಾಗುತ್ತವೆ. ಶರಣರು ಕಾಯಕದಲ್ಲಿ ನಿಷ್ಠೆಯನ್ನಿಟ್ಟು ಆಚಾರವಿಚಾರಗಳ ಕಡೆಗೆ ಲಕ್ಷ್ಯಕೊಡುತ್ತಿದ್ದರಲ್ಲದೆ ಅವರಲ್ಲಿ ಜಾತಿವಾದಕ್ಕೆ ಆಸ್ಪದವಿದ್ದಿಲ್ಲವೆಂಬುವದು ಬಸವಣ್ಣನವರ ವಚನದಿಂದಲೇ ತಿಳಿಯುವದು.

"ದೇವಸಹಿತ ಭಕ್ತಮನೆಗೆ ಬಂದೊಡೆ ಕಾಯಕವಾವುದೆಂದು ಬೆಸಗೊಂಡೆನಾದೊಡೆ, ಅಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ ತಲೆದಂಡ, ತಲೆದಂಡ. ಕೂಡಲಸಂಗಮದೇವಾ, ಭಕ್ತರಲ್ಲಿ ಕುಲವನರಸುವಡೆ ನಿಮ್ಮ ರಾಣಿವಾಸದಾಣೆ"

ಸ್ತ್ರೀಯರಿಗೂ ಕೂಡಾ ಸರ್ವ ವಿಧದಿಂದ ಪುರುಷರಂತೆ ಸಮಾನವಾದ ಅಧಿಕಾರವು ಕಾಯಕದಲ್ಲಿ ಇದ್ದಿತು. ಆದ್ದರಿಂದಲೇ ಅನೇಕ ಶಿವಶರಣೆಯರೂ ಕೂಡಾ ಆಗಿಹೋದರು.

## ಕಾಯಕವೂ ದೇಶೋದ್ಧಾರವೂ.

ಕಾಯಕಕ್ಕೂ ದೇಶೋದ್ಧಾರಕ್ಕೂ ಅತ್ಯಂತ ನಿಕಟಸಂಬಂಧವಿದೆ. ಇದಕ್ಕೆ ಸಕಲೈಶ್ವರ್ಯದಿಂದ ಕೂಡಿದ್ದ ಪೂರ್ವದ ಆರ್ಯಭೂಮಿಯೇ ದೃಷ್ಟಾಂತವು. ಮೊದಲಿನ ನಮ್ಮ ದೇಶದ ಸಂಪತ್ತನ್ನೂ ಕೈಗಾರಿಕೆಯ ಕಲೆಯ ಕುಶಲತೆಗಳನ್ನೂ ನೆನಿಸಿಕೊಂಡರೆ ದುಃಖವಾಗುತ್ತದೆ. ಆಗಿನ ನಮ್ಮ ಉನ್ನತಸ್ಥಿತಿಯನ್ನು ಎಷ್ಟೋ ಪರದೇಶದ ಪ್ರವಾಸಿಕರೂ ವಿದ್ವಾಂಸರೂ ಅನೇಕ ರೀತಿ ಹಾಡಿಹರಿಸಿದ್ದಾರೆ. ಅದಕ್ಕೆಲ್ಲ ನಮ್ಮ ಪೂರ್ವ

ಜರ ಕರ್ತವ್ಯವಿಸ್ಮೃತಿಯೇ ಕಾರಣ- ಆಗಿನ ಶಿಲ್ಪಕಲೆಗಳೂ ಕಟ್ಟಡಗಳೂ ಇಂದಿಗೂ ನೋಡುವವರ ಮನಸ್ಸನ್ನು ದಂಗುಬಡಿಸುತ್ತವೆ. ಆದ್ದರಿಂದಲೇ ನಮ್ಮ ಭಾರತವು ಅನ್ಯರ ಸಹಾಯವನ್ನು ಬೇಡದಲೇ ತನ್ನ ಸಾಮರ್ಥ್ಯದಿಂದ ಬಾಳಿ ಮೆರೆಯುತ್ತಿತ್ತು. ಬರಬರುತ್ತ ಪರರಾಷ್ಟ್ರಗಳ ಸಂಸರ್ಗದಿಂದಲೋ, ಅಥವಾ ಕಾಲಚಕ್ರದ ವೈಪರೀತ್ಯದಿಂದಲೋ, ನಮ್ಮ ಭಾರತದಲ್ಲಿ ಸೋಮಾರಿತನವು ಮನೆಮಾಡಿತು. ನಂತರ ಭಾರತೀಯರು ಸ್ವಾತಂತ್ರ್ಯತೆಯ ತಳಹದಿಯಾದ ಕಾಯಕಮಂತ್ರವನ್ನು ಮರೆತರು. ಹಾಗೆ ಮಾಡಿದ್ದರಿಂದಲೇ ನಾವು ಪರರ ದಾಸ್ಯತ್ವವನ್ನು ಸ್ವೀಕರಿಸಬೇಕಾಯಿತು. ನಮ್ಮ ದೇಶದ ಕಚ್ಚಾ ಮಾಲಿನಿಂದ ನಮ್ಮ ಒಡವೆಗಳನ್ನು ನಾವೇ ತಯಾರಮಾಡಿಕೊಂಡರೆ, ನಮ್ಮ ಸಂಪತ್ತು ನಮ್ಮಲ್ಲೇ ಉಳಿಯುವದು. ಆ ತತ್ವವನ್ನು ೮ ನೂರು ವರ್ಷಗಳ ಕೆಳಗೆ ಪ್ರಚಾರ ಮಾಡಿದ ಬಸವನು ಕೇವಲ ಮತೋದ್ಧಾರಕನಾಗದೆ ರಾಷ್ಟ್ರೋದ್ಧಾರಕನಾಗಿ ಭರತಖಂಡದಲ್ಲಿ ಅಗ್ರಗಣ್ಯನಾದನು. ಆದ್ದರಿಂದ ಕಾಯಕವು ದೇಶೋದ್ಧಾರಕ್ಕೆ ತಳಹದಿಯೆಂಬುದನ್ನು ಪ್ರತಿಯೊಬ್ಬನು ಲಕ್ಷ್ಯದಲ್ಲಿಡಬೇಕು.

## ಕಾಯಕವೂ — ವೀರಶೈವರೂ.

ವೀರಶೈವರ ಪ್ರತಿಯೊಂದು ಧಾರ್ಮಿಕ ಕಾರ್ಯದಲ್ಲಿ ಕಾಯಕಗಳು ಒಂದು ವಿಶಿಷ್ಟ ತತ್ವವನ್ನು ಹೊಂದಿಕೊಂಡಿರುತ್ತವೆ. ನಮ್ಮ ಮತತತ್ವಗಳಾದ, ಅಷ್ಟಾವರಣ ಪಂಚಾಚಾರ, ಷಟ್‌ಸ್ಥಲಗಳು ಕಾಯಕಗಳನ್ನು ಬಿಟ್ಟು ಇಲ್ಲವೇ ಇಲ್ಲ. ಸ್ಥಲಸಂಕೋಚದಿಂದ ಒಂದೆರಡನ್ನು ತೋರಿಸುತ್ತೇನೆ. ಅಷ್ಟಾವರಣಗಳಲ್ಲಿ ಭಸ್ಮವು ಶಾಸ್ತ್ರದ ಪ್ರಕಾರ ಹೇಗೆ ತಯಾರಾಗಬೇಕು ಎಂಬುದನ್ನು ಹೇಳಿದೆ. ಶಿವಭಕ್ತರಾದ ನಾವುಗಳು ಅದನ್ನು ಮರೆತು ಸ್ಮಶಾನದ ಬೂದಿಯನ್ನು ತಂದು ಅಶುದ್ಧವಾಗಿ ಮಾಡಿ ಭವಿಜನರು ಅಭಕ್ಷ್ಯಪದಾರ್ಥಗಳ ಮಧ್ಯದಲ್ಲಿರುವ ಬಾಜಾರದಲ್ಲಿ ಮಾರುವದನ್ನು ತಂದು ಧರಿಸುತ್ತೇವೆ. ಅಂದಮೇಲೆ ಅಷ್ಟಾವರಣಗಳಲ್ಲಿ ಎಷ್ಟು ನಿಷ್ಠೆ ಇರುವದೆಂಬದು ಕಂಡುಬರುತ್ತದೆ. ಇದರಂತೆ ಉಳಿದವುಗಳ ಪರಿಸ್ಥಿತಿಯು. ಆದರೆ ನಾವು ಹಾಗೆ ಮಾಡದೆ ಶರಣತತ್ವದಂತೆ ಶಾಸ್ತ್ರ ಪದ್ಧತಿಯಂತೆ ನಮ್ಮ ಕಾರ್ಯಗಳನ್ನು ನಾವೇ ಮಾಡಿಕೊಳ್ಳಬೇಕು.

## ಕಾಯಕವೂ, ಮನಸ್ಸೂ.

ಮಾನವನು ಕರ್ಮನಿರತನಾದರೆ ಸಶಕ್ತನೂ ಧೈರ್ಯಶಾಲಿಯೂ, ಚತುರನೂ ಆಗುವನಲ್ಲದೆ ಸ್ಥಿರಚಿತ್ತನಾಗುವನು. ಸ್ಥಿರ ಚಿತ್ತತೆಗೆ ಕಾಯಕವೇ ಮೂಲವೆಂದು ಗೀತೆಯು ಬೋಧಿಸುತ್ತದೆ.

" ಕಾಯೇನಮನಸಾಬುದ್ಧ್ಯಾ ಕೇವಲೈರಿಂದ್ರಿಯೈರಪಿ । ಯೋಜನಃ ಕರ್ಮಕುರ್ವಂತಿ । ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥ "

ಆದ್ದರಿಂದ ಚಿತ್ತಶುದ್ಧಿಗಾಗಿ ಕಾಯಕ ಮಾಡಬೇಕು. ಇದೇ ತತ್ವವನ್ನು ತಿಳಿದು ಯಾವತ್ತರೂ ಕಾಯಕವೇ ಕೈಲಾಸ, ದೇಶ ಸೇವೆಯೇ ಈಶ ಸೇವೆ, ಜನತೆಯು ಸೇವೆಯೇ ಜನಾರ್ದನ ಸೇವೆ, ಎಂಬುದನ್ನು ಸ್ಮರಿಸುತ್ತಾ ಮಹಾತ್ಮರ ಆಚರಣೆಗಳನ್ನು ಆಚರಿಸುತ್ತ ತಮ್ಮ ಐಶ್ವರ್ಯವನ್ನು ಸೂರಿಮಾಡುತ್ತ ಸುಖೋಪಭೋಗಗಳನ್ನು ತ್ಯಜಿಸುತ್ತ ಅನೇಕ ಕಷ್ಟಗಳನ್ನನುಭವಿಸುತ್ತ ಕಿಂಕರತ್ವವನ್ನು ವಹಿಸುತ್ತ ಸರ್ವಕಾರ್ಯಗಳನ್ನು ಕೈಮುಟ್ಟಿ ಮಾಡುತ್ತ ದೇಶೋದ್ಧಾರಕ್ಕಾಗಿ ತನು ಮನಧನಗಳನ್ನು ಸವಿಸುತ್ತ ಅಹಿಂಸಾ ತತ್ವವನ್ನು ಬೋಧಿಸುತ್ತ ಜಾತಿವಾದವನ್ನು ದೂಡುತ್ತ ಸಮತಾವಾದವನ್ನು ಬೀರುತ್ತ ಸ್ವಾತಂತ್ರ್ಯ ಮಂತ್ರವನ್ನು ಜಪಿಸುತ್ತ, ಉಜ್ವಲಪ್ರಭೆಯನ್ನು ಬೆಳಗುತ್ತ ಸರ್ವ ಭಾರತ ವಾಸಿಗಳೆಲ್ಲರಿಗೂ ಕಾಯಕವೇ ಕೈಲಾಸವೆಂಬುವದನ್ನು ನೆನೆಯುತ್ತ ಆಚರಿಸಿದಲ್ಲಿ ಸ್ವಲ್ಪೇ ದಿವಸಗಳಲ್ಲಿ ನಮ್ಮ ಪೂರ್ವದ ವೈಭವವನ್ನು ನಾವು ಕಾಣುತ್ತೇವೆ. ಮತ್ತು ಕರ್ಮಪ್ರಿಯನಾದ ಪರಮೇಶ್ವರನ ಮನ್ನಣೆಗೆ ಪಾತ್ರರಾಗುತ್ತೇವೆ.

### ರಾ॥ ಬ॥ ಹಳಕಟ್ಟಿಯವರಿಗೆ ನನ್ನ ಕಾಣಿಕೆ.

" ಯುಕ್ತಿವಂತನೇ । ಭಕ್ತಿಲೋಲನೇ ॥<br>
ಶಿವತತ್ವವೃದ್ಧಿ । ಭವಜೀವಶುದ್ಧಿ । ಶಿವಾನುಭವ ಸಿದ್ಧ ॥೧॥<br>
ಕಾಯ ಕನ್ನಡ ಸೇವೆಯ । ತನು ಮನ ಧನದಿ । ಖಿನ್ನನಾಗದೆಗೈದ ॥೨॥<br>
ವಚನಸಾರ ಸಾಹಿತಿ । ವಾಚಕ ಜನಕೆ । ತೋಚಿದ ಮಹಿಮ ॥೩॥<br>
ರಾಜಕಾರ್ಯದೊಳ್ । ನೀ ಬುದ್ಧಿಯ ತೋರಿ । ರಾವಬಹಾದ್ದೂರ ನೀ ॥೪॥<br>
ವಿಜಯಪುರವಾಸನೆ । ವಚನ ಸಮ್ರಾಟನೆ । ಕನ್ನಡ ಸಿರಿವಂತ" ॥೫॥

---

# ವ ಚ ನ.

(ಬರೆದವರು — ಮಹಾಂತಪೇವ ಶಿ. ಮಂದಿರ. ಇಲಕಲ್ಲ)

೧

ಇಂದಿನ ಜನಮತಿ । ಆದರದಿಂದಲಿ
ಶೋಧಿಸಿ ವಚನವ ಪರಿಪರಿಯಿಂ ।
ದಾದರಗೊಂಡೀ । ಸಾಧಕ ವರ್ಗಕೆ
ಮೋದದ ಮಾರ್ಗವ ತೋರಿಹುದು ॥

೨

ವಚನದಿ ಹೆಣೆದಿದೆ । ನೀತಿಯ ಮಾಲೆಯು
ವೇದದ ಮರ್ಮವು ಧರ್ಮದ ಮೋಕ್ಷ ।
ಸತ್ಯದ ನುಡಿಯಿದೆ । ಶಾಂತಿಯ ಸೊಬಗಿದೆ
ಭಕುತಿಯ ರಸ ತಾನುಕ್ಕುತಿದೆ ॥

೩

ಹೃದಯವು ಕರಗಿದೆ । ಬೆಡಗಿದೆ ಕಾವ್ಯದ
ಆಚಾರದ ಕಣ ಕಾಣುತಲಿದೆ ।
ಕರುಣೆಯು ತುಂಬಿದೆ । ಕಿಂಕರ ಭಾವವು
ತುಳುಕಿದೆ ಅನುಭವ ಸುಧೆಯಿಂದ ॥೩॥

# ನಾದ-ಬಿಂದು-ಕಲೆಗಳು.

( ಲೇಖಕ:— ಶ್ರೀಯುತ ಬಸವಪ್ಪ ಚೆನ್ನಪ್ಪ ಪಟ್ಟೇದ ವಂಟಿಮುರಿ )

ಮಹಾಲಿಂಗವು ಸಕಲ ಲಿಂಗಗಳ ಆದಿ ಸ್ವರೂಪವು. ಅದಕ್ಕಿಂತ ಹಿಂದೆ ಹೋದರೆ, ಮೊದಲು ನಿಷ್ಕಲಲಿಂಗ, ಬಳಿಕ ನಿಃಶೂನ್ಯಲಿಂಗ, ತರುವಾಯ ನಿರಂಜನ ಲಿಂಗವೆಂದು ವೀರಶೈವ ಶಾಸ್ತ್ರವು ಹೇಳುತ್ತದೆ. ಪರಾತ್ಪರವಾದ ನಿರಂಜನ ಲಿಂಗದಿಂದ ಮೊದಲು ನಾದವು ಉದ್ಭವಿಸಿತು. ಬಳಿಕ ಅದರಿಂದ ಬಿಂದುವು ಹುಟ್ಟಿತು. ಈ ನಾದ ಬಿಂದುಗಳೆರಡೂ ಕೂಡಿ ಕಲೆಯಾಯಿತು. ಹೀಗೆ ವಚನಶಾಸ್ತ್ರದಲ್ಲಿದೆ. ಹೀಗೆಂದರೇನೆಂಬುದನ್ನು ಇಲ್ಲಿ ಆಲೋಚಿಸುವಾ. ಆ ಪರಾತ್ಪರ ಲಿಂಗವು ಅನಂತ ಕಾಲದ ವರೆಗೆ ತನ್ನಲ್ಲಿ ತಾನೇ ಸ್ವಸ್ಥವಾಗಿದ್ದು, ಮುಂದೆ ಅದರಲ್ಲಿ ಹೀಗೆ ಸ್ವಸ್ಥವಾಗಿರದೆ ಏನಾದರೂ ಲೀಲೆಮಾಡಬೇಕೆಂಬ ಕಲ್ಪನೆ ನಾಂಟಿತು. ಈ ಕಲ್ಪನೆ (ಸಂಕಲ್ಪನೆ)ಯೇ ನಾದವೆಂದು ಕರೆಯಲ್ಪಟ್ಟಿತು. ಈ ನಾದೋತ್ಪತ್ತಿಯ ಪೂರ್ವದ ಪರಾತ್ಪರ ಲಿಂಗವೇ ನಿರಂಜನ (ಯಾವತರದ ರಂಜನೆಯೂ ಇಲ್ಲದ) ಲಿಂಗ. ನಾದದಿಂದೊಡಗೂಡಿದ ಅದರ ಸ್ವರೂಪವೇ ನಿಃಶೂನ್ಯಲಿಂಗ. ಇದರಲ್ಲಿಯೂ ಈಗ ನಾವು ಸೃಷ್ಟಿಯಲ್ಲಿ ಕಾಣುವ ವಿಧವಿಧದ ಯಾವ ವಸ್ತುಗಳೂ ಇರಲಿಲ್ಲವೆಂದೇ ಇದಕ್ಕೆ ಈ ಹೆಸರು ಬಂದಿರುವುದು. ಬಿಂದುವಿನಿಂದೊಡಗೂಡಿದ ನಿಃಶೂನ್ಯಲಿಂಗದ ಸ್ವರೂಪವೇ ನಿಷ್ಕಲಲಿಂಗ. ಇದರಲ್ಲಿ ಕಲೆಯ ಸಮಾವೇಶವಿಲ್ಲ. ಅಂತೇ ಅದು ನಿಷ್ಕಲಲಿಂಗವೆನಿಸಿತು. ನಾದ ಬಿಂದು ಕಲೆ ಈ ಮೂರರಿಂದ ಸಹಿತವಾದ ಲಿಂಗವೇ ಸಕಲ ಲಿಂಗವಾಯಿತು. ಇದು ನಿಷ್ಕಲಲಿಂಗದಲ್ಲಿ ಕಲೆ ಬೆರೆದುದರ ಪರಿಣಾಮವು, ಅದೇ ಮಹಾಲಿಂಗ. ಇದರಲ್ಲಿ ಕಲೆಯ ವರೆಗೆ ಎಲ್ಲವೂ ಕೂಡಿಕೊಂಡಿವೆ. ಇದೇ ದೃಷ್ಟಿಯಿಂದ ವಿಚಾರಿಸಿದರೆ, ನಿಷ್ಕಲಲಿಂಗವನ್ನು ಸಬಿಂದು ಲಿಂಗವೆಂದೂ, ನಿಃಶೂನ್ಯಲಿಂಗವನ್ನು ಸನಾದಲಿಂಗವೆಂದೂ ಪರಾತ್ಪರ ಲಿಂಗವಾದ ನಿರಂಜನವನ್ನು ನಿರ್ನಾದಲಿಂಗವೆಂದೂ ಕರೆಯಬಹುದು. ಮಹಾಲಿಂಗದ ತರುವಾಯದ ಸಕಲಲಿಂಗಗಳು— ಪ್ರಸಾದಲಿಂಗ, ಚರಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗಗಳು— ಬರುಬರುತ್ತ ಹೆಚ್ಚೆಚ್ಚು ಸ್ಥೂಲವಾಗಿ ಕ್ರಮದಿಂದ ಒಂದರಿಂದೊಂದು ಉದ್ಭವಿಸಿದುವು.

ನಿರಂಜನ ಲಿಂಗದಲ್ಲಿ ನಾದವು ಹುಟ್ಟಿದ ಮಾತ್ರಕ್ಕೆ ಬರೀ ಅಷ್ಟರಿಂದಲೇ ಲೀಲೆ ಸಂಭವಿಸಲಾರದು. ಬರಿಗೈಯಿಂದ ಹೇಗೆ ಮೊಳಹಾಕಲಿಕ್ಕೆ ಬರುವುದಿಲ್ಲವೋ ಹಾಗೆಯೆ ಬಿಂದುವಿಲ್ಲದೆ[೧] ಮುಂದಿನ ಕಾರ್ಯವೇ ನಡೆಯಲಾರದು. ಈ ಬಿಂದುವೇ ಎಲ್ಲ ಕಲೆಗಳ ಹಾಗು ಸೃಷ್ಟಿಯ ಉತ್ಪತ್ತಿಗೆ ಕಾರಣವಾಗುವುದು. ಈ ನಾದ ಬಿಂದು ಕಲೆಗಳೇ (ರೂಪ-ಶಕ್ತಿಗಳೇ) ಮುಂದೆ ಪರಮಾತ್ಮನ ಲೀಲೆಗೆ (ಸೃಷ್ಟಿಯ ಉತ್ಪತ್ತಿಗೆ) ಕಾರಣವಾದವು. ಇವಕ್ಕೇ ಸತ್ತು (ಬಿಂದು), ಚಿತ್ತು (ಮೂಲಜ್ಞಾನವೆಂಬ ನಾದ), ಆನಂದ (ಕಲೆ) ಎಂತಲೂ ಹೆಸರಗಳು.

ಇನ್ನು ಇಲ್ಲಿ (ನಿಷ್ಕಲಾದಿ ತ್ರಿಲಿಂಗಗಳಲ್ಲಿ) ಗುರು ಲಿಂಗ ಜಂಗಮಗಳದೆಂತು ಸಂಬಂಧಿಸುವುವೆಂಬದನ್ನು ನೋಡೋಣ. ಇದಕ್ಕೂ ಮೊದಲು ಕಾಯ ಗುರು, ಪ್ರಾಣ ಲಿಂಗ, ಸುಜ್ಞಾನ ಜಂಗಮವೆಂಬುದನ್ನು ಪೂರ್ಣ ಲಕ್ಷ್ಯದಲ್ಲಿಟ್ಟುಕೊಂಡಿರಬೇಕು. ಕಾಯವು ಸ್ಥೂಲವಾದುದೂ, ಪ್ರಾಣವು ಸೂಕ್ಷ್ಮವಾದುದೂ, ಸುಜ್ಞಾನವು ಆವೆರಡಕ್ಕೂ ಕಾರಣವಾದ ಪರಾತ್ಪರ ವಸ್ತುರೂಪವಾದುದೂ ಎಂಬುದನ್ನು ಮರೆಯಕೂಡದು.

ನಿಷ್ಕಲಲಿಂಗದಲ್ಲಿ— ಕಲೆಯು ಮೂಲತಃ ಇಲ್ಲವೇ ಇಲ್ಲ. ಅದರಲ್ಲಿ ಬಿಂದುವೇ ಹೆಚ್ಚು ಸ್ಥೂಲವಾದುದು. ಆದುದರಿಂದ ಅದೇ ಗುರು. ಅದಕ್ಕಿಂತ ನಾದವು ಹೆಚ್ಚು ಸೂಕ್ಷ್ಮವಾದುದರಿಂದ ಅದು ಲಿಂಗ. ಇವೆರಡಕ್ಕೂ ಕಾರಣವಾದ ಪರವಸ್ತುವೇ ಜಂಗಮವು.

ನಿಃಶೂನ್ಯಲಿಂಗದಲ್ಲಿ— ಇದರೊಳಗೆ ಬರೀ ನಾದಮಾತ್ರವಿರುವುದು. ಆದಕಾರಣ ಅದೇ ಸ್ಥೂಲ. ಅದರಿಂದ ಅದೇ ಗುರು. ಪರವಸ್ತುವಿಗೆ

---

೧ ಭೂಮಿತಿ ಶಾಸ್ತ್ರದಲ್ಲಿ "ಬಿಂದುವಿಗೆ ಸ್ಥಿತಿ ಮಾತ್ರವಿದ್ದು ಪರಿಮಾಣ (ಉದ್ದ, ಅಗಲು, ದಿಂಡ)ಗಳೇನೂ ಇರುವದಿಲ್ಲ" ಎಂದು ನಿರ್ದಿಷ್ಟವಾಗಿದೆ. ಈ ಬಿಂದುವು ಚಲಿಸಿದರೆ ರೇಖೆಯೂ, ರೇಖೆ ಚಲಿಸಿದರೆ ಕ್ಷೇತ್ರವೂ, ಹುಟ್ಟುವುವು. ಈ ರೇಖೆ ಕ್ಷೇತ್ರಗಳೇ ಕಲೆಗಳು. ಕ್ಷೇತ್ರವು ಚಲಿಸಿದರೆ ಘನವಾಗುವುದು. ಅದು ಮಾತ್ರ ಸ್ಥೂಲ ರೂಪವನ್ನು ತಾಳುವುದು; ಹಾಗು ವಸ್ತುವೆನಿಸುವುದು. ತತ್ತ್ವಶಾಸ್ತ್ರದೊಳಗಿನ ಬಿಂದು ಕಲೆಗಳ ಸ್ವರೂಪವನ್ನು ಈ ದೃಷ್ಟಾಂತದಿಂದ ಸುಲಭವಾಗಿ ಅರಿಯಬಹುದು.

ವಾಹನವಾಗಿರ್ದ ಮೂಲ ಜ್ಞಾನವೇ ಲಿಂಗ. (ಯಾಕಂದರೆ "ಪ್ರಜ್ಞಾನಂ ಬ್ರಹ್ಮ" ಎಂದು ಶ್ರುತಿ ಇರುವುದು.) ಪರವಸ್ತುವೇ ಜಂಗಮ.

ನಿರಂಜನಲಿಂಗದಲ್ಲಿ— ಪರವಸ್ತುವನ್ನು ವಹಿಸಿದ ಮೂಲಕ ಮಹಾ ಜ್ಞಾನವೇ ಗುರು. ನಿರಂಜನ ಸ್ವರೂಪವೇ ಲಿಂಗ. ಪರವಸ್ತುವೇ ಜಂಗಮ.

ಈ ವಿಷಯದಲ್ಲಿ ಮುಂದಿನ ವಚನವೇ ನಿದರ್ಶನವಾಗಿದೆ:—

"ಅಯ್ಯಾ ನೀನು ನಿರಾಕಾರವಾಗಿದ್ದಲ್ಲಿ ನಾನು ಜ್ಞಾನವೆಂಬ ವಾಹನವಾಗಿರ್ದೆ ಕಾಣಾ. ಅಯ್ಯಾ ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನವಾಗಿರ್ದೆ ಕಾಣಾ. ಅಯ್ಯಾ ನೀನು ಆಕಾರವಾಗಿರ್ದಲ್ಲಿ ನಾನು ವೃಷಭವೆಂಬ ವಾಹನವಾಗಿರ್ದೆ ಕಾಣಾ. ಅಯ್ಯಾ ನೀನು ಎನ್ನ ಭವವ ಕೊಂದಿಹೆನೆಂದು ಜಂಗಮವಾಗಿ ಬಂದರೆ ನಾನು ಭಕ್ತನೆಂಬ ವಾಹನವಾಗಿರ್ದೆ ಕಾಣಾ ಕೂಡಲಸಂಗಮದೇವಾ."

ಈ ಗುರು ಲಿಂಗ ಜಂಗಮಗಳು ಕೇವಲ ತೋರಿಕೆಯಲ್ಲಿ ಮಾತ್ರ ಉಂಟು. ಅವೆಲ್ಲ ಒಂದೇ ಪರವಸ್ತುವಿನ ಬೇರೆ ಬೇರೆ ರೂಪಗಳು. "ಏಕ ಏವ ಶಿವಃ ಸಾಕ್ಷಾತ್ ಸರ್ವಾನುಗ್ರಾಹಕಃ ಪ್ರಭುಃ। ಗುರು ಜಂಗಮ ಲಿಂಗಾತ್ಮಾ, ವರ್ತತೇ ಭುಕ್ತಿ ಮುಕ್ತಿದಃ। ಎಂದು ಹೇಳಿದೆ. ಇವಕ್ಕೆಲ್ಲ ಅನಾದಿ ಶರಣನೇ (ಮೂಲ ಮಹಾಜ್ಞಾನವೇ) ಆಶ್ರಯವಾಗಿರುತ್ತಾನೆ.

---

# ಮಹಾ ಪುರುಷರ ಆಚರಣೆ.

(ಲೇಖಕರು— ರಾ॥ ಬ॥ ಪಿ. ಜಿ. ಹಳಕಟ್ಟಿ.)

---

ಪೃಥ್ವಿಯ ಇತಿಹಾಸದಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿದವರನೇಕರಿದ್ದಾರೆ. ಧಾರ್ಮಿಕ ಕ್ಷೇತ್ರದಲ್ಲಿ ಅತ್ಯುಚ್ಚ ಸ್ಥಾನವನ್ನು ಅವರು ಪಡೆದಿದ್ದಾರೆ. ಸಾಮಾಜಿಕ ರಂಗದಲ್ಲಿ ಕ್ರಾಂತಿಯನ್ನುಂಟುಮಾಡಿದ್ದಾರೆ. ರಾಜಕೀಯ ರಂಗದಲ್ಲಿ ಅವರು ಅನೇಕ ಸಾಹಸ ಕೃತ್ಯಗಳನ್ನು ಮಾಡಿ ನಾಡಿನ ಪರಿಸ್ಥಿತಿಯಲ್ಲಿ ಬದಲಾವಣೆಯನ್ನು ಮಾಡಿದ್ದಾರೆ. ಇಂಥ ಮಹಾ ಪುರುಷರಲ್ಲಿ ಇತರರಲ್ಲಿರದ ಆವುದೋ ಒಂದು ಅಲೌಕಿಕ ಗುಣವಿರುತ್ತದೆಂದು ಅನೇಕರು ವಾಡಿಕೆಯಾಗಿ ತಿಳಿಯುವದುಂಟು. ಆದರೆ ಪ್ರಖ್ಯಾತಿ ಹೊಂದಿದ ಮಹಾ ಪುರುಷರ ಜೀವನ ಚರಿತ್ರೆಯನ್ನು ನಾವು ನಿರೀಕ್ಷಿಸಿದಲ್ಲಿ ಇಂಥ ಅದ್ಭುತ ಗುಣವು ಅವರಲ್ಲಿರುವದು ಕಂಡುಬರುವದಿಲ್ಲ. ಅವರು ಎಲ್ಲರಂತೆಯೇ ಇರುತ್ತಾರೆ ಮತ್ತು ವರ್ತಿಸುತ್ತಾರೆ. ಆದರೆ ಅವರ ವರ್ತನೆಯಲ್ಲಿ ಒಂದು ವೈಶಿಷ್ಟ್ಯವಿರುತ್ತದೆ. ಅವರು ಶ್ರೇಷ್ಠ ಮತ್ತು ಅತ್ಯುಚ್ಚ ಗುರಿಯನ್ನಿಟ್ಟು ಕೊಂಡು ಅದಕ್ಕೋಸ್ಕರ ಅವರು ನಿರಂತರ ಶ್ರಮಬಡುವದೇ ಅವರ ಈ ವೈಶಿಷ್ಟ್ಯವು. ಈ ಗುಣದಿಂದಲೇ ಅವರು ಉನ್ನತ ಪುರುಷರಾಗಿರುತ್ತಾರೆ. ಇದೇ ಅವರನ್ನು ಉಚ್ಚಸ್ಥಿತಿಗೆ ತಂದಿರುತ್ತದೆ.

ಇವರಲ್ಲಿ ಕೆಲವರು ಉಚ್ಚ ಶಿಕ್ಷಣವನ್ನು ಹೊಂದಿದವರಿರಬಹುದು. ಬೇರೆ ಕೆಲವರು ಅಶಿಕ್ಷಿತರಿರಬಹುದು. ಕೆಲವರು ಸುಸಂಸ್ಕೃತರಿರಬಹುದು. ಕೆಲವರು ಅತ್ಯಂತ ಕರ್ಕಶ ವರ್ತನೆಯುಳ್ಳವರು ಇರಬಹುದು. ಅವರಲ್ಲಿ ಕೆಲವರು ಪ್ರೇಮಳ ಮನಸ್ಸಿನವರಿರಬಹುದು. ಬೇರೆ ಕೆಲವರು ಕಠೋರ ಮನಸ್ಸಿನವರಿರಬಹುದು. ಕೆಲವರು ಎಲ್ಲರ ಕೂಡ ಸ್ನೇಹ ಭಾವದಿಂದ ವರ್ತಿಸುತ್ತಿರಬಹುದು. ಬೇರೆ ಕೆಲವರು ಇತರರನ್ನು ದುರ್ಲಕ್ಷಿಸುತ್ತ ಅತ್ಯಂತ ಅಹಂಕಾರಿಗಳೂ ಇರಬಹುದು. ಆದರೆ ಇವರೆಲ್ಲರೂ ಕೆಲವೊಂದು ಉಚ್ಚ ಕಾರ್ಯವನ್ನು ಕೈಕೊಂಡವರಿರುತ್ತಾರೆ. ಆ ಕಾರ್ಯದಿಂದ ಅವರು ಎಂದೂ ಚ್ಯುತರಾಗುವದಿಲ್ಲ. ಅದನ್ನು ಬಿಟ್ಟು ಅವರು ಅತ್ತಿತ್ತ ಚಲಿಸುವದಿಲ್ಲ. ಮಹಾ ಪುರುಷರು ಜನರು

ಹೇಳಿದತ್ತ ಹೋಗುವವರಲ್ಲ. ಅವರು ಚಂಚಲವೃತ್ತಿಯುಳ್ಳವರಲ್ಲ ಅವರು ಯಾವಾಗಲೂ ನಿರ್ಧಾರ ವೃತ್ತಿಯುಳ್ಳವರಿರುತ್ತಾರೆ. ಈ ವೃತ್ತಿಯು ಮೂಲಕ ಅವರು ಮುಂಸುವರಿಯುತ್ತಾರೆ.

ಆದುದರಿಂದ ಮಹಾಪುರುಷನಾಗಬೇಕೆನ್ನುವವನು ಕೆಲವೊಂದು ಉನ್ನತ ಕಾರ್ಯವನ್ನು ಕೊನೆಗಾಣಿಸಬೇಕೆಂಬ ದೃಢನಿಶ್ಚಯವುಳ್ಳವನಾಗಿರಬೇಕು. ಅವನು ಅದಕ್ಕೋಸ್ಕರ ಕಷ್ಟಸಹಿಸಲು ಯಾವಾಗಲೂ ಸಿದ್ಧನಾಗಿರಬೇಕು. ಅದರ ಸಾಧನೆಗಾಗಿ ಅವನು ಕೆಲವೊಂದು ಮಾರ್ಗವನ್ನು ನಿರ್ಧರಿಸಿಕೊಳ್ಳಬೇಕು. ಆ ಮಾರ್ಗದಿಂದ ಅವನು ಗಮಿಸುವಾಗ ಅವನಿಗೆ ಅನೇಕ ಕಷ್ಟ ನಷ್ಟಗಳು ಉಂಟಾಗಬಹುದು. ಆದರೂ ತನ್ನ ಧ್ಯೇಯಸಾಧನೆಯ ವಿಷಯವಾಗಿ ಅವನಲ್ಲಿ ಭರವಸೆ ಇರುವದರಿಂದ, ಅವನು ಇವುಗಳನ್ನು ಗಣಿಸುವದಿಲ್ಲ. ಮಹಾ ಪುರುಷನಲ್ಲಿ ಇಂಥ ವೃತ್ತಿಯು ಇರುವದರಿಂದ ಅವನು ಎಂಥವನಿದ್ದರೂ ಅವನಿಂದ ಉಚ್ಚ ಕಾರ್ಯಗಳಾಗುತ್ತ ಹೋಗುತ್ತವೆ.

ಮಹಾಪುರುಷನಲ್ಲಿ ನಿರ್ಮಾಣ ಮಾಡುವ ಶಕ್ತಿಯು ಇರುತ್ತದೆ. ಅವನ ಕಾರ್ಯಗಳು ಯಾವಾಗಲೂ ರಚನಾತ್ಮಕವಾಗಿರುತ್ತವೆ. ಅವನು ಯಾವಾಗಲೂ ಕಲ್ಪಕನಿರುತ್ತಾನೆ. ಅವನು ಗ್ರಂಥಕಾರನಿರಬಹುದು, ವೈಜ್ಞಾನಿಕನಿರಬಹುದು, ಅಥವಾ ತತ್ವವೇತ್ತನಾಗಿರಬಹುದು. ಯಾವನಿದ್ದರೂ ನಿತ್ಯಕ್ರಮದಂತೆ ಮಾಡಿದ್ದನ್ನು ಮಾಡುತ್ತ ಹೋಗುವ ಮನುಷ್ಯನು ಅವನಲ್ಲ. ಎಲ್ಲರೂ ತುಳಿದ ಹಾದಿಯಲ್ಲಿ ಅವನು ಮೆಟ್ಟುವದಿಲ್ಲ. ಅವನು ಯೋಜಕನಿರುತ್ತಾನೆ.

ಆದರೆ ಅವನು ತೋರಿಕೆಯಲ್ಲಿ ವಾಡಿಕೆಯ ಮನುಷ್ಯನಂತೆಯೇ ಕಾಣುತ್ತಾನೆ. ಅವನು ಕೇವಲ ಸಾಮಾನ್ಯ ಬುದ್ಧಿಯುಳ್ಳವನು ಇರಬಹುದು. ಅನುಕೂಲ ಪರಿಸ್ಥಿತಿಯೂ ಕೂಡ ಅವನಿಗಿರಲಿಕ್ಕಿಲ್ಲ. ಆದರೆ ತಾನು ಕೈಕೊಂಡ ಕಾರ್ಯದಲ್ಲಿ ಮಾತ್ರ ಅವನು ಶ್ರಮವಹಿಸುತ್ತ ಮುಂದುವರಿಯುವವನಾಗಿರುತ್ತಾನೆ. ಅವನು ಮುಂದುವರಿಯುತ್ತ ಹೋದ ಹೋದ ಹಾಗೆ ಅವನಿಗೆ ಮಹಾಪುರುಷನ ಸ್ಥಾನವು ತಾನಾಗಿಯೇ ಪ್ರಾಪ್ತವಾಗುತ್ತ ಹೋಗುತ್ತದೆ.

ಇಂಗ್ಲಂಡದಲ್ಲಿ ಆಗಿಹೋದ ಮಹಾಪುರುಷರಲ್ಲಿ ನೆಲ್ಸನ್ನನ ಸ್ಥಾನವು ಉಚ್ಚತರವಾದದ್ದು. ಅವನು ಶ್ರೇಷ್ಠ ನೌಕಾಧಿಪತಿಯು. ತನ್ನ ನೌಕೆಯಕಿಂತಲೂ ಹೆಚ್ಚು ಬಲವುಳ್ಳ ಇದಿರಾಳಿಗಳ ನೌಕೆಗಳೊಡನೆ ಯುದ್ಧ ಮಾಡುವ ಪ್ರಸಂಗಗಳು ಅವನಿಗೆ ಆಗಿಂದಾಗ್ಗೆ ಬರುತ್ತಿದ್ದವು ಆದರೆ ಆಗ ಅವನು ತನಗೆ ಅನುಕೂಲ ಸಮಯವು ಒದಗಲೆಂದು ಅದನ್ನು ಕಾಯುತ್ತ ಎಂದೂ ಕುಳ್ಳಿರಲಿಲ್ಲ. ತತ್ಕ್ಷಣವೇ ಅವನು ಇದಿರಾಳಿಗಳ ಮೇಲೇರಿ ಹೋಗುವನು. ಮುಂದುವರಿಯುವದೇ ಅವನ ನಿತ್ಯದ ಹಂಬಲವಾಗಿತ್ತು. ಯುದ್ಧಕಾಲದಲ್ಲಿ ಅವನ ಒಂದು ಕೈಯು ಹೋಯಿತು. ಒಂದು ಕಣ್ಣನ್ನು ಕಳೆದುಕೊಂಡನು. ಆದರೆ ಕಡೆಯವರೆಗೂ ಶತ್ರುಗಳೊಡನೆ ಕಾದಲು ಮುಂದುವರಿದನು. ಆದರಲ್ಲಿಯೇ ಅವನು ತನ್ನ ಪ್ರಾಣವನ್ನು ಕಳೆದುಕೊಂಡನು. ಇದರಿಂದ ಅವನು ಜಗತ್ಪ್ರಸಿದ್ಧನಾದನು.

ಯುದ್ಧ ಕಾರ್ಯಗಳಲ್ಲಿ ಮಿಗಿಲಾದ ಶೌರ್ಯತೋರಿಸಿದವರಿಗೆ ಇಂಗ್ಲಂಡದ ಬಾದಶಹರು ವ್ಹಿ. ಸಿ. ಎಂಬ ಪದವಿಯನ್ನು ಕೊಡುವದುಂಟು. ಶೂರ ಪುರುಷರಿಗೆಯೇ ಇದು ಸಲ್ಲುತ್ತದೆ. ಒಂದು ದಿನ ಹಿಂದಿನ ಜಾರ್ಜಬಾದಶಹರು ಇಂಥ ೩೨೪ ಜನರನ್ನು ತಮ್ಮ ಅರಮನೆಗೆ ಬರಮಾಡಿಕೊಂಡು ಸನ್ಮಾನಿಸಿದರು. ಇವರಲ್ಲಿ ಕೆಲವರು ಸಾಮಾನ್ಯ ಶಿಪಾಯರೂ ಕೆಲವರು ಉಚ್ಚ ಸೈನ್ಯಾಧಿಪತಿಗಳೂ ಕೆಲವರು ಸುಶಿಕ್ಷಿತ ಗ್ರ್ಯಾಜ್ಯುಏಟರೂ ಕೆಲವರು ಅಂಗಡಿಗಳಲ್ಲಿಯ ಕಾರಕೂನರೂ ಇದ್ದರು. ಶೂರತನವು ಎಲ್ಲರಲ್ಲಿಯೂ ವಾಸಿಸುತ್ತದೆ. ಈ ಗುಣವು ಎಲ್ಲ ಪಂಗಡದವರಲ್ಲಿಯೂ ಇರುತ್ತದೆ.

ಆದರೆ ಸಾವನ್ನು ನಿರ್ಭಯದಿಂದ ಎದುರಿಸಿದ ಈ ವ್ಹಿ. ಸಿ. ಪದವಿಯನ್ನು ಹೊಂದಿದ ಈ ಪುರುಷರ ಮುಖಮುದ್ರೆಗಳಲ್ಲಿ ಕಠೋರತನವಿರಲಿಲ್ಲ. ಅವುಗಳಲ್ಲಿ ಸೌಮ್ಯ, ಶಾಂತ, ಮತ್ತು ಸಮಾಧಾನ ವೃತ್ತಿಯು ಕಂಗೊಳಿಸುತ್ತಿತ್ತು. ಅವರಾರೂ ಕ್ರೂರ ಮತ್ತು ರೌದ್ರಮುದ್ರೆಯುಳ್ಳವರಿರಲಿಲ್ಲ. ಇದಕ್ಕೆ ಬದಲಾಗಿ ಅವರಲ್ಲಿ ಕೆಲವರು ಸೂಕ್ಷ್ಮ ಮತ್ತು ಮೃದು ಶರೀರವುಳ್ಳವರಾಗಿದ್ದರು. ಅವರೆಲ್ಲರೂ ಸಾಮಾನ್ಯ ಸಭ್ಯಗೃಹಸ್ಥರಂತೆಯೇ ಕಾಣುತ್ತಿದ್ದರು. ಆದರೆ ಅವರೆಲ್ಲರಲ್ಲಿ ಮಿಗಿಲಾದ ಧೈರ್ಯವೊಂದಿತ್ತು. ಗಂಡಾಂತರಗಳಿಗೆ ಎಂದೂ ಅಂಜದ ಪ್ರಭಾವವು ಅವರ

ದಾಗಿತ್ತು. ಇದೇ ಅವರ ವೈಶಿಷ್ಟ್ಯವು. ಇದರಿಂದಲೇ ಅವರು ಮಹಾ ಪುರುಷರ ವರ್ಗದಲ್ಲಿ ಗಣಿಸಲ್ಪಡುವವರಾದರು.

ಸ್ತ್ರೀಯರು ಗಂಡಸರಂತೆಯೇ ಧೈರ್ಯಶಾಲಿಗಳಿರುತ್ತಾರೆ. ತಾಯಿಯು ಸುಡುತ್ತಲಿರುವ ಮನೆಯಲ್ಲಿರುವ ತನ್ನ ಮಗುವನ್ನು ಉಳಿಸಲಿಕ್ಕೆ ನಿರ್ಭಯದಿಂದ ಜ್ವಾಲೆಯೊಳಗೆ ಧುಮುಕಿ ಮುಂದೆ ಹೋಗುವದನ್ನು ಅನೇಕರು ಕಂಡಿದ್ದಾರೆ. ಧೈರ್ಯವು ಗಂಡಸರಿಗೆ ಮಾತ್ರವಿರುತ್ತದೆಂದು ಯಾರೂ ತಿಳಿಯಕೂಡದು. ಕಾಳಗಗಳಲ್ಲಿ ಸ್ತ್ರೀಯರು ಧೈರ್ಯ ತೋರಿಸಿದ್ದರ ಉದಾಹರಣೆಗಳು ಇತಿಹಾಸದಲ್ಲಿ ಅನೇಕವಿರುತ್ತವೆ.

ಧೈರ್ಯದ ಮಹತ್ವವು ವ್ಯವಹಾರದಲ್ಲಿಯೂ ಕೂಡ ಉಂಟು. ಅಂಗಡಿಯಲ್ಲಿ ಲಾಭವಾಗುವದು ಅದರ ಯಜಮಾನನ ಧೈರ್ಯದ ಮೇಲೆ ಅವಲಂಬಿಸಿದೆ. ಅವನು ಹೊಸತಾದುದನ್ನು ಕೈಕೊಳ್ಳುವಲ್ಲಿ ಧೈರ್ಯವುಳ್ಳವನಾಗಿರಬೇಕು. ಇದರಲ್ಲಿ ಅವನಿಗೆ ತೊಂದರೆಗಳುಂಟಾಗಬಹುದು. ಕೆಲವೊಂದು ವೇಳೆ ಅವನಿಗೆ ಅಪಯಶಸ್ಸು ಬರಬಹುದು. ಆದರೆ ಅವನು ಎದೆಗುಂದದೆ ತನ್ನ ಕಾರ್ಯಗಳನ್ನು ಮುಂದುವರಿಸುತ್ತಾ ಇರುವನು.

ಇಂಥ ಧೈರ್ಯವು ಮಹಾಪುರುಷರಲ್ಲಿ ಚಿಕ್ಕಂದಿನಿಂದಲೂ ಬಹುಶಃ ವಾಸವಾಗಿರುತ್ತದೆ. ಚಿಕ್ಕ ಬಾಲಕರಿರುವಾಗಲೇ ಅಂದರೆ ಅವರ ಆಟಗಳಲ್ಲಿ, ಅವರ ವರ್ತನೆಯಲ್ಲಿ, ಈ ಗುಣವು ಮೊದಲು ಪ್ರಕಟವಾಗುತ್ತದೆ. ಆಗಿಂದಾಗ್ಗೆ ಅವರು ಅದನ್ನು ತಮ್ಮ ನಿತ್ಯದ ವ್ಯವಹಾರದಲ್ಲಿ ಉಪಯೋಗಿಸುತ್ತ ಹೋಗುತ್ತಾರೆ. ಇದರಿಂದ ಅದು ಅವರ ಸ್ವಭಾವವಾಗಿಯೇ ಉಳಿದುಬಿಡುತ್ತದೆ. ಧೈರ್ಯವು ಮನುಷ್ಯನ ಹುಟ್ಟು ಗುಣವಲ್ಲ. ನಿತ್ಯದ ಅಭ್ಯಾಸದಿಂದ ಇದನ್ನು ಉಂಟುಮಾಡಿಕೊಳ್ಳಬಹುದು. ಇದನ್ನು ಮನಶ್ಶಕ್ತಿಯ ಮೂಲಕ ದೃಢಪಡಿಸಿಕೊಳ್ಳಬಹುದು. ಈ ಧೈರ್ಯಕ್ಕೆ ಉಚ್ಚ ಧ್ಯೇಯವನ್ನು ಸಂಗಡಿಸಿದಲ್ಲಿ ಮನುಷ್ಯನಿಂದ ಮಹತ್ವದ ಕಾರ್ಯಗಳು ಆಗಹತ್ತುತ್ತವೆ.

ಆದ್ದರಿಂದ ವ್ಯವಹಾರದಲ್ಲಿ ನಮ್ಮ ತರುಣರು ಕಠಿಣವಿರುವ ಕೆಲಸಗಳನ್ನು ಮಾಡಲು ಯಾವಾಗಲೂ ಆಶಿಸಬೇಕು. ಇದಕ್ಕೆ ಅವರು ಹಿಂಜ

ರಿಯಬಾರದು. ಅವರು ಹಗುರು ಕೆಲಸಗಳನ್ನು ಎಂದೂ ಬೇಡಬಾರದು.
ಯಾರು ಕಠಿಣ ಕೆಲಸಗಳನ್ನು ಬೇಡುತ್ತಾರೋ ಅವರು ಉಳಿದವರಿ
ಗಿಂತಲೂ ಬಹು ಬೇಗನೆ ಮುಂದುವರಿಯುಹತ್ತುತ್ತಾರೆ.

ಆದರೆ ಬಹು ಜನರು ತಮಗೆ ಹಗುರು ಕೆಲಸಗಳನ್ನು ಕೊಡ
ಬೇಕೆಂದು ಯಾವಾಗಲೂ ಬಯಸುವದುಂಟು. ಅವರು ಕಠಿಣ ಕೆಲ
ಸಗಳಲ್ಲಿರುವ ಜವಾಬುದಾರಿಗಳನ್ನೂ ಗಂಡಾಂತರಗಳನ್ನೂ ಎದುರಿಸಲು
ಹಿಂಜರಿಯುತ್ತಾರೆ. ಅವರು ವಿನೋದದಲ್ಲಿ ಕಾಲಕಳೆಯಲು ಯಾವಾಗಲೂ
ಬಗೆಯುತ್ತಾರೆ. ಇಲ್ಲವೆ ಇತರರು ಹೇಳಿದಂತೆ ವರ್ತಿಸುತ್ತ ಹೋಗುತ್ತಾರೆ.
ಇವರ ಆಯುಷ್ಯವೆಲ್ಲ ಇತರರು ಹೇಳಿದಂತೆ ನಡಿಯುವದು ಮತ್ತು
ವಿನೋದ ಇವುಗಳಲ್ಲಿಯೇ ಹೋಗಿಬಿಡುತ್ತದೆ. ಕೆಲಸವನ್ನು ಸ್ವಲ್ಪಮಾತ್ರ
ಮಾಡಿ ಬಹಳ ಗಳಿಸಬೇಕೆಂದು ಇವರ ಬಲವಾದ ಆಸೆ. ಆದರೆ ಇವರು
ಕಡೆಯ ವರೆಗೂ ಸಾಮಾನ್ಯರಂತೆ ಉಳಿದು, ಕಡೆಗೆ ಏನೂ ಮಾಡದೆ
ಸತ್ತುಹೋಗಿ ಬಿಡುತ್ತಾರೆ.

ಅನೇಕ ತರುಣರು ವ್ಯವಹಾರದಲ್ಲಿ ಬಿದ್ದ ಬಳಿಕ ಗಂಡಾಂತರ
ಗಳಿಲ್ಲದ ಹಗುರು ದಾರಿಯನ್ನು ಹುಡುಕುವದರಲ್ಲಿಯೇ ಕಾಲಕಳೆಯು
ತ್ತಾರೆ. ಆದರೆ ಆಯುಷ್ಯದಲ್ಲಿ ಹಗುರು ದಾರಿ ಎಂಬುದು ಇಲ್ಲ.
ಯಾರಾದರೂ ಇಂಥ ದಾರಿಯು ಇರುತ್ತದೆಂದು ಹೇಳಿದರೆ ಅದು ನಿಜ
ವಲ್ಲ. ಜಗತ್ತಿನಲ್ಲಿ ಸಂಪೂರ್ಣ ಸುರಕ್ಷಿತವಿದ್ದುದು ಎಲ್ಲಿಯೂ ಇಲ್ಲ.
ನಮ್ಮ ತರುಣರು ಸುಶಿಕ್ಷಿತರಾದ ಬಳಿಕ ೨೦ ವರ್ಷ ಕಾಲಕಳೆದ ನಂತರ
ಇದು ಅವರಿಗೆ ಗೊತ್ತಾಗಹತ್ತುತ್ತದೆ. ಯಾವ ವ್ಯವಹಾರವಿದ್ದರೂ
ಅದರಲ್ಲಿ ಅನಿಶ್ಚಿತತೆಯು ಇದ್ದೇ ಇರುತ್ತವೆ. ಆದ್ದರಿಂದ ಕಾಲ ಕಾಲಕ್ಕೆ
ಉಂಟಾಗುವ ಗಂಡಾಂತರಗಳಿಂದ ಓಡಿ ಹೋಗದೆ ಅವುಗಳನ್ನು ಇದಿರಿ
ಸುವದರಲ್ಲಿಯೇ ಪುರುಷಾರ್ಥವಿದೆ.

ಮೊಸಳೆಗಳಿದ್ದ ಒಂದು ನದಿಯಲ್ಲಿ ಒಬ್ಬ ವೃದ್ಧನು ಅಂಜಿಕೆ ಇಲ್ಲದೆ
ಸ್ನಾನ ಮಾಡುತ್ತಿದ್ದನು. ಅದನ್ನು ಒಬ್ಬನು ನೋಡಿ ಇದರಲ್ಲಿ ಸ್ನಾನ
ಮಾಡಲು ನಿನಗೆ ಅಂಜಿಕೆ ಹೇಗೆ ಬರುವದಿಲ್ಲ ಎಂದು ಕೇಳಲು
ಅವನು ಉತ್ತರ ಕೊಟ್ಟದ್ದು—" ಈ ಮಡುವಿನಲ್ಲಿ ಮೊಸಳೆಯು ಇದ್ದಿರ
ಬಹುದು ಅಥವಾ ಇರಲಿಕ್ಕಿಲ್ಲ. ಒಂದು ವೇಳೆ ಎಲ್ಲಾದರೂ ಒಂದು

ಇದ್ದರೆ, ಅದರ ದೃಷ್ಟಿಗೆ ನಾನು ಬೀಳಲಿಕ್ಕಿಲ್ಲ. ಒಂದು ವೇಳೆ ಅದು ನನ್ನನ್ನು ನೋಡಿದ್ದರೆ, ಅದು ಹಸಿದಿರಲಿಕ್ಕಿಲ್ಲ. ಆದ್ದರಿಂದ ಅದು ನನ್ನ ಮೇಲೆ ಬರಲಿಕ್ಕಿಲ್ಲ. ಒಂದು ವೇಳೆ ಅದು ನನ್ನ ಮೇಲೆ ಬಂದರೂ ನನ್ನ ಮೇಲಿನ ಅದರ ಗುರಿಯು ತಪ್ಪಬಹುದು. ಹೀಗೆ ಸಂಗತಿಗಳಿರುವದರಿಂದ ನಾನು ಅಂಜುವದಿಲ್ಲ ಎಂದು ಹೇಳಿದನು. ಆ ಮುದುಕನು ಆ ಮಡುವಿನಲ್ಲಿಯೇ ಯಾವಾಗಲೂ ಜಳಕ ಮಾಡುತ್ತಿದ್ದನು. ಆದರೆ ಅವನಿಗೆ ಎಂದೂ ಅಪಾಯವಾಗಿರಲಿಲ್ಲ. ಜಗತ್ತೆಂಬುದು ಹೀಗೆಯೇ ಇದೆ. ಅದರಲ್ಲಿ ಗಂಡಾಂತರಗಳಿವೆ. ಅವುಗಳಿಗಂಜುವವನಿಂದ ಮಹತ್ವದ ಕಾರ್ಯಗಳಾಗವು.

ಆದ್ದರಿಂದ ಮನುಷ್ಯನು ತನ್ನ ಜೀವಿತದಲ್ಲಿ ಎದೆಗುಂದಬಾರದು. ಹೊಸತಾದುದನ್ನು ಮಾಡಲು ಹಿಂಜರಿಯಬಾರದು. ಯಾವಾಗಲೂ ಮುಂದುವರಿಯುತ್ತಿರಬೇಕು. ಎಂಥ ತೊಂದರೆಗಳು ಬಂದರೂ ಹಿಡಿದುದನ್ನು ಬಿಡೆನೆಂಬ ಧೈರ್ಯವು ಅವನಲ್ಲಿರಬೇಕು. ಆದರೆ ಜನರಲ್ಲಿ ಕಲ್ಪನಾ ಸೃಷ್ಟಿಯಲ್ಲಿ ಯಾವಾಗಲೂ ಓಲಾಡುವವರೇ ಬಹಳ. ಅವರು ಹೊಸದಾದುದನ್ನು ಕೈಕೊಳ್ಳಲು ಬಲು ಹಿಂಜರಿಯುತ್ತಾರೆ. ಇವರಿಗೆ ತೊಂದರೆಗಳು ಬಂದರೆ ಇಲ್ಲವೆ ಯಾರಾದರೂ ಟೀಕಿಸಿದರೆ ಸಾಕು, ಅವರು ಕೂಡಲೆ ಧೈರ್ಯಗುಂದುತ್ತಾರೆ. ಇವರು ಜಾಣರಿರಬಹುದು. ಆದರೆ ಅವರಲ್ಲಿ ದೃಢವಾದ ಆತ್ಮವಿಶ್ವಾಸ ಮತ್ತು ಧೈರ್ಯವು ಇರುವದಿಲ್ಲವಾದ್ದರಿಂದ ಮಹತ್ವದ ಕಾರ್ಯಗಳು ಅವರಿಂದ ಆಗಲಾರವು.

ಹೊಸ ಕಾರ್ಯಗಳನ್ನು ಆರಂಭಿಸಿದ ಕೂಡಲೆ ಜನರು ತಮ್ಮನ್ನು ಹೊಗಳುವರೆಂದು ಇವರು ಬಹಳ ಅಪೇಕ್ಷಿಸುತ್ತಾರೆ. ಆದರೆ ಜನರು ಹೊಗಳುವ ಬದಲು ಅವರನ್ನು ಟೀಕಿಸಹತ್ತುತ್ತಾರೆ. ಟೀಕೆಯನ್ನು ಲೆಕ್ಕಿಸದೆ ಧೈರ್ಯದಿಂದ ಮುಂದುವರಿದದ್ದಾದರೆ, ಜನರು ಅವರ ದಾರಿಯಲ್ಲಿ ಬುದ್ಧಿಪೂರ್ವಕವಾಗಿ ಪ್ರತಿಬಂಧಗಳನ್ನು ಒಡ್ಡಹತ್ತುತ್ತಾರೆ. ಜನರು ಅವರಿಗೆ ಎಂದೂ ಉತ್ತೇಜನ ಕೊಡುವದಿಲ್ಲ. ಆದ್ದರಿಂದ ಹೊಸ ಕಾರ್ಯಗಳನ್ನು ಕೈಕೊಳ್ಳುವದು ಎಷ್ಟು ಮಹತ್ವವಾದುದೋ, ಅದನ್ನು ಮುಂದುವರಿಸಲಿಕ್ಕೆ ಬೇಕಾಗುವ ಧೈರ್ಯವು ಅದಕ್ಕೂ ಬಹಳ ಹೆಚ್ಚು ಮಹತ್ವವಾದುದು. ಹೀಗಿದ್ದರೆ ಮಾತ್ರ ಆರಂಭಿಸಿದ ಕಾರ್ಯವನು ಕೊನೆಗಾಣಿಸಲಿಕ್ಕೆ ಮನುಷ್ಯನು ಸಮರ್ಥನಾಗುತ್ತಾನೆ.

ಆರಂಭದಲ್ಲಿ ನಮ್ಮ ತರುಣರು ಮಹತ್ವಾಕಾಂಕ್ಷಿಗಳಾಗಿರುತ್ತಾರೆ. ಅವರು ತಮ್ಮ ಕಾರ್ಯದಲ್ಲಿ ಸಿದ್ಧಿಯು ಉಂಟಾಗಬೇಕೆಂದು ಅತ್ಯಂತ ಉತ್ಸಾಹದಿಂದ ಮೊದಲು ಕಾರ್ಯಮಾಡತೊಡಗುತ್ತಾರೆ. ತಮಗೆ ಮುಂದೆ ಆಗಬಹುದಾದ ಸುಖದ ಕಲ್ಪನೆಯಲ್ಲಿ ಸಂಪೂರ್ಣವಾಗಿ ಮುಳುಗಿ ಹೋಗಿರುತ್ತಾರೆ. ಆದರೆ ಸ್ವಲ್ಪಕಾಲದಲ್ಲಿ ಅವರ ಮೇಲೆ ಹೊಡೆತಗಳು ಬೀಳಹತ್ತುತ್ತವೆ. ಆಗ ಅವರು ಹಿಂದೆ ಮುಗ್ಗರಿಸಿ ಬೀಳುವರು. ಅವರ ಅಭಿಲಾಷೆಗಳು ಕೂಡಲೆ ಕುಗ್ಗಿಹೋಗುವವು. ಹೀಗಾದ ಕೂಡಲೆ ಅವರಿಗೆ ಅಪಯಶಸ್ಸು ಉಂಟಾಗಿ ಹಿಂದೆಬಿದ್ದು ಹೋಗುವರು. ಇಂಥ ತರುಣರು ಲಕ್ಷಾವಧಿ ಜನರು ಇರುವರು. ಇವರು ಆರಂಭದಲ್ಲಿ ಕೆಲ ವೊಂದು ಉಚ್ಚ ಧ್ಯೇಯವನ್ನು ಅನುಸರಿಸುವದು ನಿಜವು. ಆದರೆ ಅವರಿಗೆ ಮುಂದೆ ತೊಂದರೆಗಳು ಬರಹತ್ತುವವು. ಹಾನಿಯೂ ಕೂಡ ಆಗುವದು. ಆಗ ಅವರಲ್ಲಿ ಗಟ್ಟಿ ಮನಸ್ಸು ಇರದ್ದರಿಂದ ಅವರಿಗೆ ತಮ್ಮ ಧ್ಯೇಯು ವನ್ನು ಸಾಧಿಸುವದು ಆಗುವದಿಲ್ಲ. ಹತಾಶರಾಗಿ ಹಿಂದೆ ಬೀಳುತ್ತಾರೆ.

ನಮ್ಮ ತರುಣರು ಮೊದಲು ಕೆಲವೊಂದು ವ್ಯವಹಾರವನ್ನು ಆರಂಭಿ ಸುವದುಂಟು. ಆರಂಭದಲ್ಲಿ ಇರುವ ಅದರಲ್ಲಿಯ ಹೊಸತನವು ಅವರಿಗೆ ಮನೋರಂಜಕವಾಗಿ ಕಾಣುತ್ತದೆ. ಆಗ ಅವರ ಅಂಗಡಿ ಅಥವಾ ಕಾರ್ಯಾಲಯವು ಒಂದು ಸುಂದರವಾದ ಬೊಂಬೆಯಂತೆ ಶೋಭಾಯು ಮಾನವಾಗಿ ತೋರುತ್ತದೆ. ಆದರೆ ಈ ಹೊಸತನದ ಶೋಭೆಯು ಬಹಳ ದಿವಸ ಉಳಿಯುವದಿಲ್ಲ. ಆಗ ಅವರ ಪರೀಕ್ಷಾ ಕಾಲವು ಬರು ತ್ತದೆ. ಒಂದೇ ರೀತಿಯಾಗಿ ಮಾಡುವ ನಿತ್ಯದ ವ್ಯವಹಾರವು ಅವ ರಿಗೆ ಬೇಸರಿಕೆಯನ್ನುಂಟು ಮಾಡಹತ್ತುತ್ತದೆ. ಆದರೆ ನಿತ್ಯದ ವಾಡಿ ಕೆಯ ಸಣ್ಣಪುಟ್ಟ ಕೆಲಸವನ್ನು ಲವಲವಿಕೆಯಿಂದ ಮತ್ತು ಚಟುವ ಟಿಕೆಯಿಂದ ಮಾಡುವದರಲ್ಲಿಯೇ ಕಾರ್ಯದ ಅಂತಿಮ ಯಶಸ್ಸಿರುತ್ತ ರೆಂಬುದನ್ನು ಇವರು ಅರಿಯರು. ಇದು ಗೊತ್ತಿರದ್ದರಿಂದ ಅವರು ಬರ ಬರುತ್ತ ನಿರಾಶರಾಗುವರು ಮತ್ತು ಉದ್ಯೋಗದಲ್ಲಿ ನಿರುತ್ಸಾಹವುಳ್ಳವ ರಾಗುವರು. ಇಂಥವರು ಮಹತ್ವದ ಕಾರ್ಯಗಳನ್ನು ಹೇಗೆ ಮಾಡ ಬಲ್ಲರು?

ವ್ಯವಹಾರವು ಕಲ್ಲಿನಿಂದ ಕಟ್ಟಿದ ಸ್ಥಿರವಾದ ಮನೆಯಂತಿರುವದಿಲ್ಲ. ಆದರಲ್ಲಿ ನಿತ್ಯವೂ ಹೊಡೆದಾಟವಿದೆ. ಮನುಷ್ಯನ ಅವಯುವಗಳಲ್ಲಿ

ಅಳಿವು ಉಳಿವು ಇವೆರಡರ ಹೋರಾಟವು ಪ್ರತಿಕ್ಷಣ ನಡಿದಿರುತ್ತದೆ. ಹಾಗೆಯೇ ನಮ್ಮ ಜೀವನಕ್ರಮವಿದೆ. ಅದು ವ್ಯವಸ್ಥಿತವಾಗಿದ್ದರೆ ಮಾತ್ರ ನಾವು ಉಳಿವನ್ನು ಹೆಚ್ಚಿಸಿಕೊಂಡು ಸುಖವಾಗಿ ಬಾಳುತ್ತೇವೆ.

ಅನೇಕರು ತಮಗೆ ಅನುಕೂಲ ವೇಳೆಯು ಬರಬಹುದೆಂದು ಅದನ್ನು ನಿರೀಕ್ಷಿಸುತ್ತ ಕಾಲಕಳೆಯುವದುಂಟು. ಇಂಥವರು ಅಸಂಖ್ಯಾತ ರಾಗಿರುತ್ತಾರೆ. ಆದರೆ ಅನುಕೂಲ ವೇಳೆಯು ತಾನಾಗಿಯೇ ಎಂದೂ ಯಾರಿಗೂ ಬರುವದಿಲ್ಲ. ಅದು ಯಾರನ್ನೂ ತನ್ನೊಡನೆ ತಾನಾಗಿಯೇ ಕರೆದೊಯ್ದು ಆನಂದದಲ್ಲಿ ಮುಳುಗಿಸುವದಿಲ್ಲ. ಆದರೆ ಅದರ ಬದಲು ನಾನಾತರದ ತೊಂದರೆಗಳು, ವಿಪತ್ತುಗಳು, ದ್ರವ್ಯದ ಹಾನಿಗಳು, ರೋಗ ಗಳು, ಸ್ಪರ್ಧೆಗಳು ಇವುಗಳೇ ನಿತ್ಯ ಮುಕುರಿಬಂದು ಅವರ ಮೇಲೆ ಬೀಳು ತ್ತದೆ. ಆದ್ದರಿಂದ ಅನುಕೂಲ ವೇಳೆ ಎಂದರೆ ಹೊರಗಿಂದ ನಿನ್ನೆಡೆಗೆ ತಾನಾಗಿಯೇ ಬರುವಂಥ ಒಂದು ವಸ್ತುವೆಂದು ಭಾವಿಸ ಕೂಡದು. ಅದು ನಿನ್ನಲ್ಲಿಯೇ ಇದೆ. ಅದು ಕಾರ್ಯಮಾಡಬೇಕೆಂಬ ಮನಸ್ಸಿನ ಉತ್ಕಟ ಲವಲವಿಕೆ ಎಂದು ಬಗೆಯಬೇಕು. ಅದೊಂದು ಮನೋವೃತ್ತಿಯು ಇರುತ್ತದೆ. ಆವೃತ್ತಿಯು ನಿನ್ನಲ್ಲಿಯೇ ಇರುತ್ತಿದೆ. ಅದು ಹೊರಗಿನಿಂದ ಬಂದುದಲ್ಲ.

ಆದ್ದರಿಂದ ಕೆಲವರಿಗೆ ಎಂಥ ಕಷ್ಟಗಳು ಬಂದರೂ ಎಲ್ಲ ಕಡೆಗೂ ಅನುಕೂಲತೆಯ ಪರಿಸ್ಥಿತಿಯೇ ಅವರಿಗೆ ತೋರುತ್ತದೆ. ಇವರೇ ಮಹಾ ಪುರುಷರು. ಅವರ ವಿಚಾರ ಮತ್ತು ನಿರೀಕ್ಷಣ ಶಕ್ತಿಗಳು ಯಾವಾಗಲೂ ಹದನಾಗಿರುತ್ತವೆ. ಆದರೆ ಯಾರ ಬುದ್ಧಿಶಕ್ತಿಯು ತೀವ್ರವಾಗಿರುವದಿ ಲ್ಲವೋ ಅವರು ಜಗತ್ತಿನಲ್ಲಿ ಕುರುಡರಂತಿರುತ್ತಾರೆ. ಸುತ್ತಲೂ ತರತರದ ಸುಂದರ ನೋಟಗಳಿರಬಹುದು. ಆದರೂ ಅವುಗಳನ್ನು ಅವರು ಕಾಣರು. ಅವರಿಗೆ ಎಲ್ಲಕಡೆಗೂ ಮುಳ್ಳುಗಳೇ ತೋರುತ್ತವೆ.

ಕೊಲಂಬಸ, ಜೇಮ್ಸವಾಟ್ಟ, ಶೆಕ್ಸಪೀಯರ, ಕ್ರಾಮವೆಲ್ಲ, ನೆಪೋಲಿಯನ್ನ ಇವರ ಚರಿತ್ರೆಗಳನ್ನು ನೋಡಿರಿ. ಅವರಿಗೆ ಆರಂಭ ದಲ್ಲಿ ಯಾವ ಅನುಕೂಲತೆಗಳು ಇದ್ದವು? ಯಾವವೂ ಇರಲಿಲ್ಲ. ಅವರು ಅನುಕೂಲ ಪರಿಸ್ಥಿತಿಯನ್ನು ಉಂಟುಮಾಡಿಕೊಂಡರು. ಅವರು ಅವುಗಳನ್ನು ಹುಡುಕುತ್ತ ಎಂದೂ ಹೋಗಲಿಲ್ಲ. ಅವರು ಪ್ರಯತ್ನ

ಶೀಲರು. ಯಾವಾಗಲೂ ದುಡಿಯುವವರು. ದುಡಿತದಲ್ಲಿಯೇ ಅವರಿಗೆ ಆನಂದವು. ಆದ್ದರಿಂದ ಅವರು ಮಹಾಪುರುಷರಾದರು.

ಮನುಷ್ಯನು ಶ್ರೇಷ್ಠನಾಗುವದು ಅವನ ಮನಶ್ಶಕ್ತಿ, ಸ್ಥೈರ್ಯ ವ್ಯಕ್ತಿತ್ವ ನಿರಂತರವಾದ ಪ್ರಯತ್ನ ಇವುಗಳ ಮೇಲೆ ಅವಲಂಬಿಸಿದೆ. ಆದ್ದರಿಂದ ಯಾವನಿದ್ದರೂ ಕೂಡ ನಾನು ಜಯಶೀಲನಾಗುವೆನೋ ಹೇಗೆಂಬುದನ್ನು ತಿಳಿಯುವದಕ್ಕೋಸ್ಕರ ಜ್ಯೋತಿಷ್ಯವನ್ನು ಅವನು ಎಂದೂ ಕೇಳಬಾರದು. ನಕ್ಷತ್ರಗಳ ಬಲದ ಮೇಲೆ ಮನುಷ್ಯನ ಶ್ರೇಯಸ್ಸು ಅವಲಂಬಿಸಿರುವದಿಲ್ಲ. ಅವನು ಪ್ರಯತ್ನಶೀಲವಾದರೆ ನಕ್ಷತ್ರಗಳು ಅವನ ಬೆನ್ನುಹತ್ತಿಬರುವವು.

ಜಗತ್ತಿನಲ್ಲಿ ಆಗಿಹೋದ ಮಹಾಪುರುಷರು ಹೀಗೆಯೇ ಆಚರಿಸಿದ್ದಾರೆ.

---

## " ನುಡಿಯಂತೆ ನಡೆಯು ಸ್ಥಿರಗೊಳ್ಳಬೇಕು. "

( ಲೇಖಕರು — ಎನ್. ರಾಚೋಟಿಯ್ಯ ಕಾನಕಾನಹಳ್ಳಿ )

### ವಚನ.

ಆಚಾರಲಿಂಗಾನುಭಾವಿಯಾದೊಡೆ ಅಂಗಗುಣವಳಿದಿರಬೇಕು. ಗುರುಲಿಂಗಾನುಭಾವಿಯಾದೊಡೆ ಮನದ ಕಲ್ಮಶವಳಿದಿರಬೇಕು. ಶಿವಲಿಂಗಾನುಭಾವಿಯಾದೊಡೆ ಶಿವಭಕ್ತರೊಕ್ಕುಮಿಕ್ಕುದ ಸವಿಯಬೇಕು. ಜಂಗಮ ಲಿಂಗಾನುಭಾವಿಯಾದೊಡೆ ಸರ್ವ ಪ್ರಾಣಿ ಹಿತಚಿಂತಕನಾಗಬೇಕು. ಪ್ರಸಾದ ಲಿಂಗಾನುಭಾವಿಯಾಡೆ ಎಡೆಬಿಡದೆ ಶಬ್ದ ಪ್ರಸಾದವಾಗಿರಬೇಕು. ಮಹಲಿಂಗಾನುಭಾವಿಯಾದೊಡೆ ಮಹದರಿವು ತಾನೇ ತಾನಾಗಿರಬೇಕಲ್ಲದೆ ಅಂಗವಕಟ್ಟಿ ಲಿಂಗವ ಗೊತ್ತನು ಹಿಡಿಯದೆ ಎಮಗೆ ಉಪದೇಶವಾಗಿದೆ ಎನ್ನುತ್ತ ಸತಿಪತಿಗಳು ಏಕಾರ್ಥವಾಗಿ ನಡೆಯದೆ ಮತಿಗೆಟ್ಟು ಪೋಗುವ ಮೂರ್ಖ ಮನುಜರ ಕಂಡು ಎನ್ನ ಮನನಾಚಿತ್ತು ಕಾಣಾ ಓಂಕಾರೇಶ್ವರ ಪ್ರಿಯ ಮಹಾಲಿಂಗವೇ.

---

# ಗ್ರಂಥ ವಿಮರ್ಶೆ.

**ಕನ್ನಡ ನಾಡಿನ ಚರಿತ್ರೆ** ( ೨ ನೆಯ ಭಾಗ ):-- ಈ ಗ್ರಂಥವು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಗಿರುತ್ತದೆ. ಇದನ್ನು ಡಾ|| ಎಸ್. ಸಿ. ನಂದಿಮಠ ಎಮ್. ಎ, ಪಿ. ಎಚ್. ಡಿ. ಪ್ರಿನ್ಸಿಪಾಲ ಶ್ರೀ ಬಸವೇಶ್ವರ ಕಾಲೇಜ ಬಾಗಲಕೋಟ ಇವರು ರಚಿಸಿರುತ್ತಾರೆ. ಇದರಲ್ಲಿ ಕರ್ನಾಟಕ ಧರ್ಮಗಳ ವಿಷಯವಾಗಿ ಸವಿಸ್ತೃತ ವಿವೇಚನೆಯು ಇದೆ. ಗ್ರಂಥದ ಒಟ್ಟು ಪುಟಸಂಖ್ಯೆ ೨೩೪, ಬೆಲೆ ರೂ. ೧-೮-೦ ಇದೆ.

ಕರ್ನಾಟಕ ದೇಶವು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಯಾವಾಗಲೂ ಮುಂದುವರಿದದ್ದಿರುತ್ತದೆ. ಆದ್ದರಿಂದ ಕರ್ನಾಟಕವು ಹಿಂದುಸ್ತಾನದಲ್ಲಿಯ ಎಲ್ಲ ಧರ್ಮಗಳ ಆಶ್ರಯಸ್ಥಾನವಾಗಿರುತ್ತದೆ. ಕರ್ನಾಟಕ ಧರ್ಮಗಳ ವಿವರಣೆಯಲ್ಲಿ ಇವೆಲ್ಲವುಗಳ ನಿರೂಪಣೆಯು ಅವಶ್ಯವಿರುತ್ತಿದೆ. ಇದಕ್ಕನುಸಾರವಾಗಿ ವೈದಿಕ ಧರ್ಮದ ಮತ್ತು ಶೈವ, ವೈಷ್ಣವ, ಅದ್ವೈತ, ಜೈನ, ಬೌದ್ಧ ಧರ್ಮಗಳ ವಿವೇಚನೆಯು ಈ ಗ್ರಂಥದಲ್ಲಿ ಬಂದಿರುತ್ತವೆ. ಅಲ್ಲದೆ ಕ್ರಿಶ್ಚನ್ನ ಮತ್ತು ಇಸ್ಲಾಮಿ ಧರ್ಮಗಳ ನಿರೂಪಣೆಯೂ ಕೂಡ ಇದರಲ್ಲಿರುತ್ತವೆ.

ಪೂರ್ವದ ವೈದಿಕ ಧರ್ಮದಲ್ಲಿ ಸೃಷ್ಟಿಯಲ್ಲಿ ವ್ಯಕ್ತವಾಗಿರುವ ದೃಶ್ಯಗಳು ಅಂದರೆ ಮೇಘರಾಜನಾದ ಇಂದ್ರನು, ಅಗ್ನಿ, ವರುಣ, ಸೂರ್ಯ, ಉಷನ್ ಇವುಗಳನ್ನು ಶಾಂತಗೊಳಿಸುವ ಕ್ರಮಗಳಿದ್ದು, ಇವುಗಳೇ ಆಗಿನ ಧರ್ಮದಲ್ಲಿ ಸಮಾವೇಶವಾಗಿದ್ದವು. ಇವುಗಳ ಸಂಕ್ಷಿಪ್ತ ವಿವರಣೆಯು ಗ್ರಂಥಾರಂಭದಲ್ಲಿದೆ. ಮುಂದೆ ಹಿಂದೂ ಧರ್ಮದಲ್ಲಿ ತಾತ್ವಿಕ ವಿವೇಚನೆಗಳುಂಟಾಗಿ ಉಪನಿಷತ್ತುಗಳು ಉದ್ಭವಿಸಿದವು. ಈ ವಾಙ್ಮಯವು ಬರುಬರುತ್ತ ಬಹು ವಿಸ್ತಾರವಾಗುತ್ತ ಹೋಯಿತು. ಇವುಗಳ ಸಂಖ್ಯೆ ೨೦೦ ಕ್ಕಿಂತಲೂ ಕಡಿಮೆಯಾಗಿಲ್ಲ. ಇವುಗಳಲ್ಲಿ ೧೦ ಉಪನಿಷತ್ತುಗಳು ಬಹು ಮಹತ್ವವಾದವುಗಳು. ಉಪನಿಷತ್ತುಗಳ ಕಡೆಯ ಕಾಲದಲ್ಲಿ ಕರ್ಮಮಾರ್ಗ, ಸನ್ಯಾಸಮಾರ್ಗ, ಜ್ಞಾನಮಾರ್ಗ ಹೀಗೆ ಮೂರು ಮಾರ್ಗಗಳು ಉದಿಸಿದವು. ಈ ವಾಙ್ಮಯದಲ್ಲಿ ವೈದಿಕ ಕಾಲದ ದೇವತೆಗಳಿಗೆ ಸ್ಥಾನವಿಲ್ಲ. ಮುಂದೆ ಪೌರಾಣಿಕ ಕಾಲವು

ಉಂಟಾಗಿ ತ್ರಿಮೂರ್ತಿಗಳಿಗೆ ಅಂದರೆ ಶಿವ, ವಿಷ್ಣು, ಬ್ರಹ್ಮರಿಗೆ ಮಹತ್ವದ ಸ್ಥಾನವು ಪ್ರಾಪ್ತವಾಯಿತು. ಇವೆಲ್ಲವುಗಳ ವಿವರಣೆಯು ಈ ಗ್ರಂಥದಲ್ಲಿ ವಿಸ್ತಾರವಾಗಿ ಬಂದಿರುತ್ತದೆ.

ಆದರೆ ಕರ್ನಾಟಕದ ಜನತೆಯಲ್ಲಿ ಕ್ರಾಂತಿಯನ್ನುಂಟುಮಾಡಿದ್ದು ಶೈವಮತವು. ಶಿವನನ್ನು ಲಿಂಗರೂಪದಿಂದ ಪೂಜಿಸುವ ರೂಢಿಯು ಈಮತದಲ್ಲಿದೆ. ಶಿವನು ಸಚ್ಚಿದಾನಂದ, ನಿತ್ಯ, ಪರಿಪೂರ್ಣ, ಸರ್ವಶಕ್ತ, ನಿಷ್ಕಲ, ನಿರಂಜನನಾಗಿರುವನೆಂದು ಶೈವರು ತಿಳಿಯುತ್ತಾರೆ. ಆದ್ದರಿಂದ ಈ ಭಾವವನ್ನು ವ್ಯಕ್ತಗೊಳಿಸಲು ಶೈವರು ಲಿಂಗವನ್ನು ಕಲ್ಪಿಸಿದ್ದಾರೆ. ಆದರೆ ಅನೇಕರು ಲಿಂಗದ ಬಗ್ಗೆ ವಿಪರೀತಾರ್ಥವನ್ನು ಕಲ್ಪಿಸಿ ಅಂದರೆ ಅದು 'ಶಿಶ್ನದೇವ' ಎಂದು ತಿಳಿದು ಶೈವರ ಮನಸ್ಸಿಗೆ ಹತ್ತುವಂತೆ ಅರ್ಥಮಾಡುತ್ತಾರೆ. ಆದರೆ ಇದು ನಿರಾಧಾರವಾದದ್ದೆಂದು ಡಾ|| ನಂದಿಮಠರವರು ಈ ಗ್ರಂಥದಲ್ಲಿ ಸಕಾರಣವಾಗಿ ಸಿದ್ಧಪಡಿಸಿದ್ದಾರೆ. ಶೈವರಲ್ಲಿ ಇಂಥ ಭಾವವು ಎಷ್ಟು ಮಾತ್ರವೂ ಇರುವದಿಲ್ಲ. ಲಿಂಗ ಪೂಜೆಯಲ್ಲಿ ಹೇಯವಾದ ಮತ್ತು ತ್ಯಾಜ್ಯವಾದ ವಸ್ತುಗಳ ಸಂಪರ್ಕವಿಲ್ಲ. ಈ ಪೂಜೆಯು ಬಹು ಪುರಾತನಕಾಲದ್ದಾಗಿರುತ್ತದೆ. ಆದ್ದರಿಂದ ಲಿಂಗದ ಅರ್ಥವು ತಾತ್ವಿಕವೂ ಪರಿಶುದ್ಧವೂ ಆಗಿರುತ್ತದೆಂದು ಗ್ರಂಥಕಾರರ ಅಭಿಪ್ರಾಯವಿರುತ್ತದೆ. ಅವರ ಈ ವಿವೇಚನೆಯು ಸಕಾರಣವಾಗಿರುತ್ತದೆ.

ಶೈವರಲ್ಲಿ ಅನೇಕ ಪ್ರಭೇದಗಳಿವೆ. ಅವುಗಳಲ್ಲಿ ಪಾಶುಪತ, ಶೈವ ಸಿದ್ಧಾಂತ ಮತ್ತು ವೀರಶೈವ ಇವು ಮುಖ್ಯವಾದವುಗಳು. ಇವುಗಳ ಸ್ಥೂಲ ವಿವೇಚನೆಯು ಈ ಗ್ರಂಥದಲ್ಲಿ ಬಂದಿರುತ್ತದೆ. ಈ ಧರ್ಮಗಳಲ್ಲೆಲ್ಲ ಉಚ್ಚ ವಾಙ್ಮಯವು ಉಂಟಾಗಿರುತ್ತದೆ. ಇವುಗಳಲ್ಲಿ ಕರ್ನಾಟಕದಲ್ಲಿ ಮಹತ್ವದ ಕ್ರಾಂತಿಯನ್ನು ಮಾಡಿದ ಧರ್ಮವು ವೀರಶೈವವು. ವೀರಶೈವ ಧರ್ಮದ ಸಾಮಾನ್ಯ ಸ್ವರೂಪ, ಅದರ ವೈಶಿಷ್ಟ್ಯವಾದ ಷಟ್‌ಸ್ಥಲ ಮತ್ತು ಅದರ ಪ್ರಗತಿ ಇವುಗಳ ಸಾದ್ಯಂತ ವಿವೇಚನೆಯು ಈ ಗ್ರಂಥದಲ್ಲಿ ಬಂದಿದೆ.

ಈ ವಿವೇಚನೆಯಲ್ಲಿ ಬಸವಣ್ಣನವರಿಂದಲೇ ವೀರಶೈವ ಮತವು ಸ್ಥಾಪಿತವಾಯಿತೆಂದು ಅನೇಕರ ಗ್ರಹಿಕೆ ಇದ್ದು ಇದು ಸರಿಯಾದುದಲ್ಲೆಂದು ಡಾ|| ನಂದೀಮಠರವರು ಸಕಾರಣವಾಗಿ ತೋರಿಸಿದ್ದಾರೆ. ಬಸವೇಶ್ವರನಕಿಂತಲೂ ಮೊದಲು ಅನೇಕ ಶಿವಶರಣರಾಗಿ ಹೋದರೆಂಬುದನ್ನು

ಸಾಧಾರವಾಗಿ ಅವರು ಹೇಳಿದ್ದಾರೆ. ನಾವು ಪ್ರಕಟಿಸಿದ ಶಿವಶರಣರ ಚರಿತ್ರೆಗಳಲ್ಲಿ ಈ ಸಂಗತಿಯನ್ನು ನಾವು ಆಗಿಂದಾಗ್ಗೆ ಲಕ್ಷಿಸುತ್ತಬಂದಿದ್ದೇವೆ. ವೀರಶೈವ ತತ್ವಜ್ಞಾನವನ್ನು ಪರಿಶೋಧಿಸಿದಲ್ಲಿ ಅವುಗಳಲ್ಲಿ ಅತಿ ಪ್ರಾಚೀನ ತತ್ವಗಳು ಅಡಕವಾಗಿರುವದು ಕಂಡು ಬರುತ್ತದೆ. ಕರಣಹಸುಗೆಯು ಇವಕ್ಕೆ ಉದಾಹರಣೆಯಾಗಿದೆ. ಆದುದರಿಂದ ೧೨ ನೇ ಶತಮಾನದಲ್ಲಿ ವೀರಶೈವ ಮತವು ಉದಯಿಸಿತೆಂದು ಹೇಳುವದು ತಪ್ಪು. ಆದರೂ ೧೨ ನೇ ಶತಮಾನದಲ್ಲಿ ಅಸಂಖ್ಯ ಶಿವಶರಣರು ಉಂಟಾಗಿ ಧರ್ಮದಲ್ಲಿ ಅನೇಕ ಮಾರ್ಪಾಡುಗಳನ್ನು ಮಾಡಿರುವದು ನಿಜವು. ಆದರೆ ಇಷ್ಟರಿಂದಲೇ ಬಸವೇಶ್ವರನು ಧರ್ಮಸ್ಥಾಪಕನೆಂದು ತಿಳಿಯುವದು ಸರಿಯಾಗಲಾರದು. ಈ ವಿಷಯುವನ್ನು ಕುರಿತು ಡಾ॥ ನಂದೀಮಠರವರು ಮಾಡಿದ ವಿವೇಚನೆಯನ್ನು ನಾವು ಸಮರ್ಥಿಸುತ್ತೇವೆ.

ಕರ್ನಾಟಕದಲ್ಲಿ ವೈಷ್ಣವ ಮತಗಳೂ ಕೂಡ ಪ್ರಬಲವಾಗಿರುತ್ತವೆ. ಅವುಗಳನ್ನು ಡಾ॥ ನಂದೀಮಠರವರು ಈ ಗ್ರಂಥದಲ್ಲಿ ವಿವೇಚಿಸಿದ್ದಾರೆ. ಅವುಗಳಲ್ಲಿ ಭಾಗವತಪಂಥ, ಪಾಂಚರಾತ್ರ, ಶ್ರೀ ಸಾಂಪ್ರದಾಯ, ರಾಮಾನುಜಾಚಾರ್ಯರ ವಿಶಿಷ್ಟಾದ್ವೈತಮತ, ಮಧ್ವಾಚಾರ್ಯರ ದ್ವೈತಮತ ಇವುಗಳು ಮಹತ್ವವಾದವುಗಳು. ಇವು ಮುಖ್ಯವಾಗಿ ಬ್ರಾಹ್ಮಣರಲ್ಲಿ ಆಯಾಯ ಕಾಲಗಳಲ್ಲಿ ಬಹು ಹೆಚ್ಚಾದ ಆಂದೋಲನಗಳನ್ನುಂಟುಮಾಡಿವೆ. ಮುಂದೆ ಈಚೆಗೆ ದಾಸಪಂಥದಲ್ಲಿ ಅನೇಕ ದಾಸರು ಉದಯವಾದರು. ಇವರು ಬಹುಜನ ಸಮಾಜದಲ್ಲಿ ಮಹತ್ವದ ಪರಿಣಾಮಗಳನ್ನುಂಟುಮಾಡಿದ್ದಾರೆ.

ಈ ಮತಗಳಲ್ಲದೆ ಅದ್ವೈತಮತವು ಕರ್ನಾಟಕದಲ್ಲಿ ಪ್ರಾದುರ್ಭವಿಸಿರುತ್ತದೆ. ಅದರ ಮುಖ್ಯ ತತ್ವಗಳು ಈ ಗ್ರಂಥದಲ್ಲಿ ಉಲ್ಲೇಖಿಸಲ್ಪಟ್ಟಿವೆ. ಇವಲ್ಲದೆ, ಶಾಕ್ತ, ಗಾಣಪತ್ಯ, ಸ್ಕಾಂದಮತ, ಸೌರಮತ ಇವುಗಳೂ ಕಾಲ ಕಾಲಕ್ಕೆ ಉದಯವಾಗಿರುತ್ತವೆ.

ಕರ್ನಾಟಕದಲ್ಲಿ ಜೈನ ಧರ್ಮವು ಪುರಾತನ ಕಾಲದಿಂದಲೂ ನೆಲಸಿರುತ್ತದೆ. ಅನೇಕ ರಾಜರು ಈ ಮತಾನುಯಾಯಿಗಳಾಗಿದ್ದಾರೆ. ಇದರ ವಿವರಣೆಯು ಮತ್ತು ಜೈನಮತ ತತ್ವಗಳ ನಿರೂಪಣೆಯು ಈ ಗ್ರಂಥದಲ್ಲಿ ಬಂದಿವೆ. ಜೈನಮತದ ತತ್ವಗಳು ಬಹುಜನರಿಗೆ ಬಹುಶಃ

ವಿದಿತವಿರುವದಿಲ್ಲ. ಅವುಗಳ ಸಾಮಾನ್ಯ ತಿಳಿವಳಿಕೆಯು ಎಲ್ಲರಿಗೂ ಇರುವದು ಅವಶ್ಯವು. ಅದರಲ್ಲಿರುವ ಮಹತ್ವದ ತತ್ವಗಳ ವಿವೇಚನೆಯು ಈ ಗ್ರಂಥದಲ್ಲಿ ಬಂದಿದ್ದು ಅದು ಬಹು ಉಪಯುಕ್ತವಾಗಿರುತ್ತದೆ.

ಬೌದ್ಧಧರ್ಮ, ಕ್ರಿಸ್ತೀಧರ್ಮ ಮತ್ತು ಇಸ್ಲಾಂಧರ್ಮ ಈ ಧರ್ಮಗಳು ಕರ್ನಾಟಕದಲ್ಲಿವೆ. ಇವು ಪೃಥ್ವಿಯಲ್ಲಿಯ ಧರ್ಮಗಳಲ್ಲಿ ಬಹು ಮಹತ್ವವಾದವುಗಳು. ಆದರೆ ಅವುಗಳ ತತ್ವಗಳ ಪರಿಚಯವು ಬಹು ಜನರಿಗೆ ಇರುವದಿಲ್ಲ. ಅವುಗಳ ವಿಷಯವಾಗಿ ತಪ್ಪು ಗ್ರಹಿಕೆಗಳು ಇರುವದೇ ಹೆಚ್ಚು. ಅವು ಹೆಚ್ಚಾಗಿ ರೂಢವಾಗಿದ್ದ ದೇಶಗಳಲ್ಲಿ ಜನತೆಯ ಮೇಲೆ ಮಹತ್ತರ ಪರಿಣಾಮಗಳನ್ನುಂಟು ಮಾಡಿವೆ. ಇಂಥ ಧರ್ಮಗಳಲ್ಲಿರುವ ತತ್ವಗಳ ಸಾಮಾನ್ಯ ಜ್ಞಾನವು ಎಲ್ಲರಿಗಿರುವದು ಬಹು ಅವಶ್ಯವಾದದ್ದು. ಡಾ॥ ನಂದಿಮಠದವರು ಇವುಗಳ ವಿವೇಚನೆಯನ್ನು ಈ ಗ್ರಂಥದಲ್ಲಿ ಮಾಡಿದ್ದಾರೆ.

ಈಪ್ರಕಾರ ಗ್ರಂಥಕರ್ತರು ಕರ್ನಾಟಕದಲ್ಲಿ ಬಹು ಪ್ರಾಚೀನ ಕಾಲದಿಂದ ಉದ್ಭವಿಸುತ್ತ ಬಂದ ಮತಗಳ ವಿವೇಚನೆಯನ್ನು ಸಾಕಷ್ಟು ವಿಸ್ತಾರವಾಗಿಯೂ ಸ್ಫುಟವಾಗಿಯೂ ಮಾಡಿದ್ದಾರೆ. ಈ ಮತಗಳ ಪರಿಣಾಮಗಳು ಕರ್ನಾಟಕದ ಜನತೆಯ ಮೇಲೆ ಉಂಟಾಗದೆ ಇರುವದಿಲ್ಲ. ಅವುಗಳ ಪರಸ್ಪರ ಬೆರಿಕೆಯು ವಿಂಗಡಿಸಲು ಬಾರದಷ್ಟು ಆಗಿದೆಂದು ಡಾ॥ ನಂದಿಮಠರವರು ಅಭಿಪ್ರಾಯಪಟ್ಟಿದ್ದರಲ್ಲಿ ಸತ್ಯಾಂಶವಿದೆ. ಬೇರೆ ಬೇರೆ ಧರ್ಮಗಳ ಅನುಯಾಯಿಗಳು ಕಾಲಕಾಲಕ್ಕೆ ಕರ್ನಾಟಕದಲ್ಲಿ ಬಂದು ಇಲ್ಲಿ ನೆಲಿಸಿ ಇಲ್ಲಿಯ ಜನರಲ್ಲಿ ಬೆರೆತುಕೊಂಡಿರುತ್ತಾರೆ. ಇದರಿಂದ ಅವರ ಆಚಾರವಿಚಾರಗಳಲ್ಲಿ ಮಾರ್ಪಾಡುಗಳು ಸಹ ಆಗಿರುತ್ತವೆ. ಈ ಕಾರಣದ ಮೂಲಕ ನಮ್ಮ ಪ್ರಾಂತದಲ್ಲಿ ಪರಧರ್ಮ ಸಹಿಷ್ಣುತಾ ಭಾವವು ಎಲ್ಲಕ್ಕೂ ಹೆಚ್ಚಿಗಿರುತ್ತದೆ. ವೈದಿಕ ಮತಾನುಯಾಯಿಗಳಾದ ರಾಜರು ಜೈನ ಧರ್ಮಾನುಯಾಯಿಗಳಿಗೂ, ಜೈನ ಧರ್ಮಾನುಯಾಯಿಗಳಾದ ರಾಜರು ವೈದಿಕ ಮತಾನುಯಾಯಿಗಳಿಗೂ ದಾನಧರ್ಮಗಳನ್ನು ಮಾಡುತ್ತ ಬಂದಿರುವದು ತೋರಿಬರುತ್ತಿದೆ. ಶಿವ, ಧಾತೃ, ಸುಗತ, ವಿಷ್ಣು, ಜಿನ ಇವರೆಲ್ಲರೂ ಒಬ್ಬನೇ ದೇವರ ಬೇರೆ ಬೇರೆ ಹೆಸರುಗಳೆಂಬ ಭಾವವು ಕೈದಾಳದ ಶಾಸನದಲ್ಲಿ ಧ್ವನಿತವಾಗಿದೆ. ಬೇಲೂರು ಚನ್ನಕೇಶವ ದೇವಾಲಯದಲ್ಲಿಯ ಒಂದು ಶಾಸನ

ದಲ್ಲಿ ಇದೇ ಭಾವವು ವ್ಯಕ್ತವಾಗಿದೆ. ಹರಿಹರರಲ್ಲಿ ಭೇದವಿಲ್ಲೆಂದು ಹರಿಹರೇಶ್ವರ ದೇವಾಲಯದಲ್ಲಿಯ ಹರಿಹರರ ಸಂಯುಕ್ತ ವಿಗ್ರಹವೇ ಒಂದು ಹೆಗ್ಗುರುತಾಗಿದೆ. ಇದು ಇಲ್ಲಿಯ ಹಿಂದೂ ಮುಹಮ್ಮದೀಯರಲ್ಲಿಯೂ ಕೂಡ ತೋರಿಬರುತ್ತದೆ. ವಿಜಾಪುರ ಬಾದಶಹರ ಕಾಲದಲ್ಲಿ ಹೀಗಾದುದರ ಉದಾಹರಣೆಗಳು ಅನೇಕವಿರುತ್ತವೆ. ಈ ಎಲ್ಲ ಸಂಗತಿಗಳು ಹಿಂದೀ ಜನಾಂಗವು ಒಂದೇ ಎಂಬುದನ್ನು ದೃಢಪಡಿಸುತ್ತವೆ.

ಈಪ್ರಕಾರ ಈ ಗ್ರಂಥದಲ್ಲಿ ಸವಿಸ್ತಾರವಾದ ಮತವಿವೇಚನೆಯು ಇದ್ದು ಇದು ಬಹು ಉಪಯುಕ್ತ ಗ್ರಂಥವಾಗಿರುತ್ತದೆ.

---

## ಶಿವಾನುಭವ ಪತ್ರಿಕೆಗೆ ಸಹಾಯ.

ಕೆಳಗೆ ಕಾಣಿಸಿದ ಮಹನೀಯರು ಶಿವಾನುಭವ ಪತ್ರಿಕೆಯು ಈ ವರೆಗೆ ಮಾಡುತ್ತ ಬಂದ ಸೇವೆಯನ್ನು ಲಕ್ಷಿಸಿ ಈಗಿನ ಕಠಿಣ ಪರಿಸ್ಥಿತಿಯಲ್ಲಿ ಅದಕ್ಕೆ ಸಹಾಯಧನವನ್ನು ಸಲ್ಲಿಸಿದ್ದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ. ಈ ಕಾಲದಲ್ಲಿ ಅವರಿಂದ ಅದಕ್ಕೆ ದೊರಕಿದ ಇಂಥ ಸಹಾಯಧನದ ಮಹತ್ವವು ಅಪಾರವಾಗಿರುತ್ತದೆಂದು ನಾವು ಇಲ್ಲಿ ವಿವರಿಸದಿರಲಾರೆವು.

ಫ. ಗು. ಹಳಕಟ್ಟಿ.
ಸಂಪಾದಕ.

ರೂ.

(೧) ಶ್ರೀ ಮೃತ್ಯುಂಜಯ ಸ್ವಾಮಿಗಳುಹಾವೇರಿ ಪೇಟೆ-ಧಾರವಾಡ. ೨೫

(೨) ಶ್ರೀ ಸಂಗಮನಾಥ ಸ್ವಾಮಿಗಳು ವಿರಕ್ತಮಠ
ಮು. ಬಿಲ್ಲಹಳ್ಳಿ ತಾ॥ ಚನ್ನಗಿರಿ ಜಿ. ಶಿವಮೊಗ್ಗ ೨೫

(೩) ಮ. ರಾ. ರಾ. ಬಿ. ಲಿಂಗಯ್ಯನವರು ವಿಶ್ವೇಶ್ವರಪುರ
ಬೆಂಗಳೂರು ಸಿಟಿ ೪೦

---

ಶಿವದೀಕ್ಷೆ ಹೀನನಾದರೆ ಅವನು ಚಾಂಡಾಲನು, ಶೂದ್ರನು. ಶ್ವಪಚ ನಾದ ಶಿವಭಕ್ತನೇ ಸದ್ಬ್ರಾಹ್ಮಣನು, ಕುಲಜನು ಎಂದೆನಲು ಆ ವೇದಾ ಧ್ಯರು—ವೇದವನ್ನು ಹೆತ್ತಾತ ಬ್ರಹ್ಮ. ವೇದದಿಂದ ಬಿಟ್ಟು ದೈವವಿಲ್ಲ. ವೇದವೇ ಶಿವ, ಹರಿ, ಎಂದು ಹೇಳಿರುವವಾಗಿ ವೇದ ಬಲ್ಲಾತನೇ ಕುಲದಲ್ಲಿ ಅಧಿಕನು. ವೇದಾರ್ಥ ಪಾಠವಿಲ್ಲವಾತನು ಶಿವಭಕ್ತನಾದರೂ ಕುಲಹೀನನು ಎಂದು ನುಡಿದರು. ಆಗ ಮಹಾಕಾಳಯ್ಯನು—ವೇದವನ್ನು ಕಲಿತ ವಿಪ್ರನಾದರೂ ಅವನಿಗೆ ಶಿವಭಕ್ತಿ ಇಲ್ಲದಿದ್ದರೆ ಅವನು ಹೊಲೆಯು ನೆಂದು ವೇದವಾಕ್ಯ ಉಂಟು. ವೇದವಧಿಕವಾದರೆ ಅದು ಶಿವನ ಪಾದದಲ್ಲಿ ಕುನಿಯಾಗಿಯಾದರೂ ಇರಬಲ್ಲುದೇ, ಎಂದೆನಲು ವಿಪ್ರರು—ವೇದವನ್ನು ಶ್ವಾನನಗಿಂತಲೂ ಕೀಳೆಂದೆನಬಹುದೇ? ಶಿವಭಕ್ತರು ವೇದಗಳಿಗಿಂತಲೂ ಅಧಿಕರೆಂದು ಸಿದ್ಧಪಡಿಸಲು ಶ್ವಾನನಿಂದ ವೇದ ಭಾಗವನ್ನು ನುಡಿಸು ಎಂದೆನಲು, ಅದಕ್ಕೆ ಅವನು ಒಪ್ಪಿ, ಎಲ್ಲರೂ ನೋಡುವಂತೆ ಮಹಾಕಾ ಳಯ್ಯನು ಹೊಲೆಗೇರಿಯಿಂದ ಒಂದು ಶ್ವಾನನನ್ನು ಕರೆತಂದು ಅದಕ್ಕೆ— ವೇದಕ್ಕಿಂತಲೂ ಭಕ್ತನು ಘನವೆಂಬುದನ್ನು ಓದು ಎಂದೆನಲು ಅದು—ಚತುಃ ಶ್ರುತಿಯುನೆತ್ತಿ—ಶಿವಭಕ್ತಿಯುಳ್ಳ ಅನಾಮಿಕನು ಅಧಿಕನು. ವೇದಪಾಠಕ ನಾದರೂ ಭಕ್ತಿ ಹೀನ ದ್ವಿಜನು ಹೊಲೆಯುನು ಎಂಬ ಶ್ರುತಿಯು ಭಾಗ ವನ್ನು ಓದಿ ಹೇಳಲು, ವಿಪ್ರರು ನಾಚಿ ಮಹಾಕಾಳಯ್ಯನಿಗೆ ಎರಗಿ, ಶ್ವಾನನಿಗೆ ತಲೆವಾಗಿ ವಂದಿಸಿ ಹೋದರು.

ಹೀಗೆ ಮಹಾಕಾಳಯ್ಯನು ಶಿವಸಮಯಕ್ಕೆ ಗೆಲವನ್ನು ತಂದು ಶಿವಲಿಂಗಾರ್ಚನೆಯನ್ನು ಮಾಡುತ್ತ, ಭಕ್ತಿಯಿಂದ ನಡಿಯುತ್ತ ಲಿಂಗಾಂಗ ಸಮರಸ್ಯಪದವನ್ನು ಹೊಂದಿದನು.

ಜಂಬೂರು ಗ್ರಾಮದಲ್ಲಿ ಈಗಲೂ ಕಾಳಯ್ಯನ ವಿಗ್ರಹವಿದೆ. ಅದರ ಬದಿಯಲ್ಲಿ ವೇದವನ್ನು ಹೇಳುವಂತಿರುವ ಕಲ್ಲಿನ ನಾಯಿವಿಗ್ರಹವೂ ಕೂಡ ಉಂಟು.

---

# ವೀರಮ್ಮ

ವಚನಕಾರರಾದ ಶಿವಶರಣರ ಪತ್ನಿಯರಲ್ಲನೇಕರು ತಮ್ಮ ಗಂಡಂದಿರಂತೆ ಜ್ಞಾನಿಗಳಾಗಿ ವಚನಗಳನ್ನು ರಚಿಸಿದ್ದು ಕಂಡುಬರುತ್ತದೆ. ವೀರಶೈವರಲ್ಲಿ ಸ್ತ್ರೀಪುರುಷ ಭೇದವಿಲ್ಲ. ಸ್ತ್ರೀಯರು ಪುರುಷರಂತೆಯೇ ಶಿವಾನುಭವವನ್ನು ಹೊಂದಿ ಲಿಂಗಾಂಗ ಸಾಮರಸ್ಯವನ್ನು ಹೊಂದಲು ಅಧಿಕೃತರಾಗಿದ್ದಾರೆ. ಶಿವಾನುಭವವನ್ನು ಬಲ್ಲ ವೀರಶೈವ ಸ್ತ್ರೀಯರಲ್ಲಿ ವೀರಮ್ಮನೂ ಒಬ್ಬಳಿದ್ದಾಳೆ. ಅವಳು ನಾವು ಹಿಂದೆ ವಿವರಿಸಿದ ದಸರಯ್ಯನ ಪತ್ನಿಯು. ಅವಳು ವಚನಕಾರಳು. ಅವಳ ವಚನಗಳಲ್ಲಿ ನಮಗೆ ಮೂರು ವಚನಗಳು ಮಾತ್ರ ದೊರೆತಿರುತ್ತವೆ. ಅವುಗಳಲ್ಲಿ ಅವಳು ಪಾದೋದಕ ಪ್ರಸಾದದ ವಿವರಗಳನ್ನು ಸವಿಸ್ತಾರವಾಗಿ ವಿವರಿಸಿದ್ದಾಳೆ. ಅವುಗಳನ್ನು ನಾವು ಇಲ್ಲಿ ಸಮಗ್ರವಾಗಿ ಕೊಟ್ಟಿದ್ದೇವೆ.

## ವಚನಗಳು.

(೧) ಗುರುಮುಖದಿಂದ ಬಂದುದೇ ಗುರುಪ್ರಸಾದ. ಆ ಪ್ರಸಾದವನು ಲಿಂಗಕ್ಕೆ ಅರ್ಪಿಸಿದಲ್ಲಿ ಲಿಂಗಪ್ರಸಾದ. ಭೋಜ್ಯ ಕಟ್ಟಿ ಲಿಂಗಕ್ಕೆ ಕೊಟ್ಟು ಸಲಿಸುವುದೇ ಜಂಗಮಪ್ರಸಾದ. ತತ್ ್ರಸಾದಿಗಳಲ್ಲಿ ಯಾಚಿಸಿ ಅವರ ಪ್ರಸಾದವ ಕೊಂಬುದೇ ಪ್ರಸಾದಿಯ ಪ್ರಸಾದ. ಅಪೇಕ್ಷೆಯಿಂದ ಸಲಿಸುವುದೇ ಆಪ್ಯಾಯನ ಪ್ರಸಾದ. ಗುರು ಲಿಂಗ ಜಂಗಮವ ಕಂಡು ಆ ಸಮಯದಲ್ಲಿ ತೆಗೆದುಕೊಂಬುದೇ ಸಮಯ ಪ್ರಸಾದ. ಪಂಚೇಂದ್ರಿಯಗಳಲ್ಲಿ ಬರಲ್ಪಟ್ಟ ಪಂಚವಿಷಯ ಪದಾರ್ಥಂಗಳನು ಪಂಚವಿಧಲಿಂಗಕ್ಕೆ ಸಮರ್ಪಣ ಮಾಡುವುದೇ ಪಂಚೇಂದ್ರಿಯವಿರಹಿತಪ್ರಸಾದ. ಮನವೇ ಲಿಂಗ, ಬುದ್ಧಿಯೇ ಶಿವಜ್ಞಾನ, ಚಿತ್ತವೇ ಶಿವದಾಸೋಹ, ಅಹಂಕಾರದಲ್ಲಿ ಶಿವಚಿಂತನೆಯುಳ್ಳವನಾಗಿ ಸಲಿಸಿದ್ದೇ ಅಂತಃಕರಣವಿರಹಿತ ಪ್ರಸಾದ. ತ್ರಿವಿಧಾಂಗದಲ್ಲಿ ತ್ರಿವಿಧಲಿಂಗವ ಸಂಬಂಧಿಸಿ ಆ ಚಿದ್ಘನಲಿಂಗ ತಾನೆಂದರಿದು ಆ ತ್ರಿವಿಧಲಿಂಗಕ್ಕೆ ಕೊಡುವುದೇ ಸದ್ಭಾವ ಪ್ರಸಾದ. ಬಹಿರಂಗದ ಪ್ರಪಂಚವ ನಷ್ಟಮಾಡಿ ಅರಿವುವಿಡಿದು ಸಲಿಸುವುದೇ ಸಮತೆಪ್ರಸಾದ. ಶ್ರೀಗುರುವಿನ ಪ್ರಸನ್ನತ್ವವೇ ಜ್ಞಾನಪ್ರಸಾದ. ಇಂತೀ ಏಕಾದಶ ಪ್ರಸಾದವನು ಒಳಹೊರಗೆ ಪರಿಪೂರ್ಣವಾಗಿ ತಿಳಿಯುವುದೇ ಶಿವತಂತ್ರ ಗುರುಶಾಂತೇಶ್ವರಾ.

(೨) ಪಾದದಲ್ಲಿ ಪಾದೋದಕ. ಆ ಪಾದತೀರ್ಥವನು ಲಿಂಗಕ್ಕೆ ಮಜ್ಜನಕ್ಕೆರೆಯಬೇಕೆಂಬ ಇಚ್ಛೆ ಹುಟ್ಟಿದಲ್ಲಿ ಲಿಂಗೋದಕ. ಮಜ್ಜನಕ್ಕೆರೆದಲ್ಲಿ ಮಜ್ಜನೋದಕ. ಜಿಹ್ವೆಯಲ್ಲಿ ಪಂಚಾಂಗುಲದಿ ಸ್ವೀಕರಿಸಿದ್ದೇ ಸ್ಪರ್ಶನೋದಕ. ಎಚ್ಚರಿಕೆ ಸಾವಧಾನದಿಂದ ಸೇವಿಸಿದ್ದೇ ಅವಧಾನೋದಕ. ಸಲಿಸಿ ಸಂತೋಷವಾದರೆ ಆಪ್ಯಾಯನೋದಕ. ಹಸ್ತದೊಳಗಿರ್ದ ತೀರ್ಥವನು ಸಲಿಸಿದ್ದೇ ಹಸ್ತೋದಕ. ಆ ಬಟ್ಟಲಲ್ಲಿದ್ದ ತೀರ್ಥವನು ಮೂರು ಸಲ ಸ್ವೀಕರಿಸಿದ್ದೇ ಪರಿಣಾಮೋದಕ. ಆ ಪಾದೋದಕವನು ಅಂತಿಂತೆಂದು ಹೆಸರಿಡಲಿಲ್ಲವಾಗಿ ನಿರ್ನಾಮೋದಕ. ಬ್ರಹ್ಮರಂಧ್ರದಲ್ಲಿರ್ದ ಚಿದಮೃತವೆಂದು ಭಾವಿಸುವುದೇ ಸತ್ಯೋದಕ. ಇಂತೀ ದಶವಿಧಪಾದೋದಕವನು ಎನ್ನಂತರಂಗದಲ್ಲಿ ತಿಳಿದು ನಾನು ಸದ್ಯೋನ್ಮುಕ್ತನಾದೆನಯ್ಯ ಗುರುಶಾಂತೇಶ್ವರಾ.

(೩) ಚರಣಾಯುಧ ವೇಳೆಯನರಿವುದಯ್ಯ. ಭಕ್ತ ವ್ರತಹೀನನರಿದು ನೆರೆಯನಯ್ಯ. ನೆರೆದರೆ ನರಕ ಗುರುಶಾಂತೇಶ್ವರಾ.

---

## ನಾವದಿಗೆಯ ಗುಡ್ಡವ್ವ.

ಬಸವೇಶ್ವರನ ಕಾಲದಲ್ಲಿ ಶಿವಾನುಭವದ ತತ್ವಗಳು ಜನತೆಯಲ್ಲಿ ಪ್ರಸಾರ ಹೊಂದುತ್ತ ಹೋದ ಹಾಗೆ ಅಂತ್ಯಜ ಮೊದಲ್ಗೊಂಡು ಎಲ್ಲ ಸಂಗಡಗಳ ಜನರಲ್ಲಿ ಶಿವಭಕ್ತಿಯು ಹೆಚ್ಚುತ್ತ ಹೋಯಿತು. ಈ ಭಕ್ತಿಯು ಹೆಚ್ಚಿದ ಹಾಗೆ ಅವರಲ್ಲಿ ಉಚ್ಚ ನೀಚ ಭಾವಗಳು ಅಳಿದು ಹೋಗ ಹತ್ತಿದವು. ಈ ಉದಾರ ವೃತ್ತಿಯು ಸ್ತ್ರೀಯರಲ್ಲಿಯೂ ಕೂಡ ಉಂಟಾಗ ಹತ್ತಿತು. ಇದರಿಂದ ಆಗಿನ ಕಾಲದಲ್ಲಿ ಒಂದು ಮಹತ್ತರವಾದ ಸಮಾಜ ಕ್ರಾಂತಿಯು ತಲೆದೋರಿತು. ಈ ಸಂಗತಿಯು ಹೊಲೆಯಳಾದ ನಾವದಿಗೆಯ ಗುಡ್ಡವ್ವೆಯ ಚರಿತ್ರೆಯಿಂದ ತಿಳಿದು ಬರುತ್ತದೆ.

ವಿಜಾಪುರಜಿಲ್ಲೆಯ ಮುದ್ದೇಬಿಹಾಳ ತಾಲೂಕಿನಲ್ಲಿ ತಾಳೀಕೋಟಿಯಿಂದ ಈಶಾನ್ಯ ದಿಕ್ಕಿಗೆ ೭ ಮೈಲುಗಳ ಮೇಲೆ ಕಾರಗನೂರು, ಕೋಡಗನೂರು, ನಾವದಿಗೆ ಎಂಬ ಗ್ರಾಮುಗಳಿವೆ. ಇಲ್ಲಿ ಪುರಾತನ ಕಾಲದ ಅವಶೇಷಗಳು ಇನ್ನೂ ಇರುತ್ತವೆ. ಇವುಗಳಲ್ಲಿ ನಾವದಿಗೆ ಎಂಬ ಗ್ರಾಮವು ಪುರಾತನ ಕಾಲದಲ್ಲಿ ಬ್ರಾಹ್ಮಣರ ಒಂದು ಮಹತ್ವದ ಅಗ್ರಹಾರವಾ

ಗಿತ್ತು. ಅಂದರೆ ಅಲ್ಲಿ ಬ್ರಾಹ್ಮಣ ಪಂಡಿತರೂ ಜ್ಞಾನಿಗಳೂ ಬಹು ಸಂಖ್ಯಾಕರಾಗಿ ವಾಸಿಸುವ ಸ್ಥಳವಾಗಿತ್ತು. ಇಲ್ಲಿ ಗುಡ್ಡಮ್ಮ ಎಂಬ ಹೆಸರಿನ ಹೊಲೆಯಳು ವಾಸಿಸುತ್ತಿದ್ದಳು. ಅವಳು ಕೇವಲ ಶಿವಭಕ್ತೆಯು. ಸೌರಾಷ್ಟ್ರ ಸೊಮೇಶ್ವರನಲ್ಲಿ ಅತ್ಯಂತ ಭಕ್ತಿಯುಳ್ಳವಳು. ಅವಳಲ್ಲಿದ್ದ ಭಕ್ತಿಯ ಮೂಲಕ ಗ್ರಾಮದಲ್ಲಿಯ ಜನರು ಅವಳನ್ನು ಬಹಳ ಆದರಿಸುತ್ತಿದ್ದರು. ಹೀಗಿರಲು ಅವಳಿಗೆ ತೊನ್ನು ಬೇನೆಯು ಬಂದು ಅದು ದಿನ ದಿನಕ್ಕೆ ಅವಳಲ್ಲಿ ಹೆಚ್ಚುತ್ತಲೇ ಹೋಯಿತು.

ಹೀಗಿರಲು ಅವಳು ಒಂದು ದಿನ ಬ್ರಾಹ್ಮಣ ಕೇರಿಯಲ್ಲಿ ಹೋಗುತ್ತಿರುವಾಗ ಅಲ್ಲಿಯ ಬ್ರಾಹ್ಮಣರು ಅವಳಿಗೆ--ನೀನು ಹೊಲತಿಯು, ವೈಕೆಟ್ಟವಳು. ದ್ವಿಜರಿರುವ ಈ ಅಗ್ರಹಾರದಲ್ಲಿ ನಿನ್ನಂಥ ನೀಚಕುಲದವರು ಬರಕೂಡದು, ಎಂದು ಅವಳನ್ನು ತಡೆದು ನಿಂದಿಸಿ ಕೇರಿಯಿಂದ ಹೊರಗೆ ಹಾಕಿಸಿದರು. ಆಗ ಅವಳು ಮನಸ್ಸಿನಲ್ಲಿ ಬಹಳ ನೊಂದುಕೊಂಡು-- ನಾನು ಇಲ್ಲಿಗೆ ಸೌರಾಷ್ಟ್ರ ಸೋಮೇಶ್ವರನನ್ನು ಬರಮಾಡಿಕೊಂಡು ನಾನು ಬ್ರಾಹ್ಮಣರ ಗರ್ವವನ್ನು ಮುರಿಯುವೆನೆಂದು ಪ್ರತಿಜ್ಞೆಯನ್ನು ಮಾಡಿ, ಸೌರಾಷ್ಟ್ರ ಎಂದರೆ ಈಗಿನ ಗುಜರಾಥ ದೇಶಕ್ಕೆ ಹೊರಟಳು. ಅವಳು ಸೋಮೇಶ್ವರನನ್ನು ಧ್ಯಾನಿಸುತ್ತ ದಾರಿನಡೆಯುತ್ತ ಹೋಗುವವಳಾದಳು. ಅವಳು ಮಾರ್ಗದಲ್ಲಿ ಅನೇಕ ಕಷ್ಟಗಳನ್ನು ಸಹಿಸಿದಳು. ಚಳಿಗಾಳಿ ಬಿಸಿಲೆನ್ನದೆ ಮಾರ್ಗಕ್ರಮಣ ಮಾಡಹತ್ತಿದಳು. ಆಗ ಸೌರಾಷ್ಟ್ರ ಸೋಮೇಶ್ವರನು ಅವಳ ಭಕ್ತಿಗೆ ಮೆಚ್ಚಿ ಅವಳು ಅತ್ಯಂತ ಆಯಾಸಬಟ್ಟು ಬಳಲಿ ಭೂಮಿಯಲ್ಲಿ ಒರಗಿರಲು ಆಗ ಅವನು ಅವಳಿಗೆ ಪ್ರತ್ಯಕ್ಷನಾಗಿ-- ಮಗಳೇ, ನೀನೇಕೆ ಹೀಗೆ ಬಳಲಿ ಬಂದೆ? ನಾನೇ ನಿನ್ನಲ್ಲಿಗೆ ಬರುತ್ತಿದ್ದೆ. ನೀನು ಹಿಂದಿರುಗು. ನಾನೇ ನಿನ್ನ ಗ್ರಾಮಕ್ಕೆ ಬರುವೆನು ಎಂದು ನುಡಿದು, ಆಕೆಯ ವ್ಯಾದಿಹ ಅವಳ ಬಳಲಿಕೆಯನ್ನು ಹೋಗಲಾಡಿಸಿ ಅಂತರ್ಧಾನವಾದನು. ಪರಮಾತ್ಮನು ಸರ್ವವ್ಯಾಪಿಯಾಗಿದ್ದಾನೆ. ನಿಶ್ಚಲ ಭಕ್ತಿಯಿಂದ ನೆನೆದಲ್ಲಿಯೇ ಅವನು ತೋರುತ್ತಾನೆಂಬುದನ್ನು ಇಲ್ಲಿ ಕಾಣಬಹುದಾಗಿದೆ. ಆಗ ಗುಡ್ಡವ್ವೆಯು ಪರಮಾತ್ಮನ ಆಜ್ಞೆಯ ಪ್ರಕಾರ ಹಿಂದಿರುಗಿ ನಾವದಿಗೆಗೆ ಮರಳಿ ಬಂದಳು. ಅವಳು ಅಲ್ಲಿಗೆ ಬರುವಷ್ಟರಲ್ಲಿಯೇ ಶಿವನು ಆ ಗ್ರಾಮದಲ್ಲಿಯ ಶಿವಾಲಯದಲ್ಲಿ ಸೌರಾಷ್ಟ್ರ ಸೋಮೇಶ್ವರನ ರೂಪದಲ್ಲಿ

ಸ್ವಾಸ್ಥ್ಯವಾಗಿರುವದನ್ನು ಕಂಡಳು. ಇಷ್ಟೇ ಅಲ್ಲ, ಅವಳ ತೊನ್ನು ಬೇನೆಯೂ ಕೂಡ ಹೊರಟು ಹೋಗಿ, ಅವಳು ದಿವ್ಯದೇಹಿಯಾಗಿದ್ದಳು. ಅವಳ ತೊನ್ನು ಗ್ರಾಮದಲ್ಲಿ ಅವಳನ್ನು ಮೊದಲು ನಿಂದಿಸಿ ಪೀಡಿಸಿದ ವರಿಗೆ ಉತ್ಪನ್ನವಾಗಿತ್ತು. ಅದರಿಂದ ಅವರು ಅತ್ಯಂತ ಸಂಕಟದಿಂದ ಬಳಲಹತ್ತಿದ್ದರು. ಆಗ ಅವರು ತಾವು ಒಬ್ಬ ಶಿವಭಕ್ತೆಗೆ ನಿಂದಿಸಿದ್ದರ ಮೂಲಕ ತಮಗೆ ಹೀಗಾಯಿತೆಂದು ತಿಳಿದು ಅವರು ಗುಡ್ಡವ್ವನಿಗೆ ಶರಣು ಹೊಕ್ಕು ಸಾಷ್ಟಾಂಗವೆರಗಲು ಅವರ ಕುಷ್ಠರೋಗವು ಪರಿಹಾರ ವಾಯಿತು. ಇದು ಗುಡ್ಡವ್ವೆಯು ಶಿವಾನುಭವದ ಮಹತ್ವವು ಎಂದು ಗ್ರಾಮದಲ್ಲಿಯುವರು ತಿಳಿದು ಅಂದಿನಿಂದ ಅವರು ಅವಳನ್ನು ಅತ್ಯಂತ ವಾಗಿ ಆದರಿಸುವವರಾದರು. ಅವಳು ಅದೇ ಗ್ರಾಮದಲ್ಲಿ ವಾಸಿಸುತ್ತ, ಅಲ್ಲಿಯ ಸೋಮೇಶ್ವರಲಿಂಗದಲ್ಲಿಯೇ ಬಯಲಾದಳು. ಬಸವೇಶ್ವರನ ಕಾಲದಲ್ಲಿ ಅಂತ್ಯಜ ಮೊದಲ್ಗೊಂಡು ಬ್ರಾಹ್ಮಣ ವರ್ಣದವರ ವರೆಗೂ ಎಲ್ಲರಲ್ಲಿ ಶಿವಾನುಭವದ ಉದಾರ ತತ್ವಗಳು ಹೇಗೆ ಪ್ರಸಾರವಾಗುತ್ತ ನಡೆದಿದ್ದವೆಂಬುದನ್ನು ಗುಡ್ಡವ್ವೆಯ ಚರಿತ್ರೆಯಿಂದ ತಿಳಿದು ಬರುತ್ತದೆ.

ಒಂದು ಕಾಲದಲ್ಲಿ ಗುಜರಾಥ ದೇಶಕ್ಕೂ ಕರ್ನಾಟಕಕ್ಕೂ ಬಹಳ ಸಂಬಂಧವಿತ್ತು. ಆದ್ದರಿಂದ ಅನೇಕ ಶಿವಶರಣರು ಸೋಮನಾಥನ ಭಕ್ತರಾಗಿ ಅಲ್ಲಿಗೆ ಅವರು ಆಗಿಂದಾಗ್ಗೆ ಪ್ರವಾಸ ಮಾಡುತ್ತಿದ್ದುದು ಕಂಡು ಬರುತ್ತದೆ. ಇದು ಆದಯ್ಯ, ಸೊಡ್ಡಳ ಬಾಚರಸ, ಮುಂತಾದ ಶಿವ ಶರಣರ ಚರಿತ್ರೆಗಳಿಂದ ತಿಳಿದು ಬರುತ್ತಿದೆ. ಇದರಿಂದ ಕರ್ನಾಟಕ ದಲ್ಲಿ ಅನೇಕ ಕಡೆಗೆ ಸೌರಾಷ್ಟ್ರ ಸೋಮನಾಥನ ಹೆಸರಿನಿಂದ ಅನೇಕ ಸೋಮನಾಥನ ದೇವಾಲಯುಗಳು ಉಂಟಾಗಿವೆ.

---

## ಅಮುಗಿದೇವ.

ಸೊನ್ನಲಿಗೆಯಲ್ಲಿ ಅಮುಗಿದೇವನೆಂಬ ಶಿವಶರಣನು ಕುರುಹಿನ[೧] ಶೆಟ್ಟಿಯ ಪಂಗಡದವನಾಗಿ ನೇಗಿಯ ಕಾಯಕವನ್ನು ಮಾಡುತ್ತ ಶಿವಾ ನುಭವಿ ಎಂದು ಹೆಸರಾಗಿದ್ದನು. ಸೊನ್ನಲಿಗೆಯು ಈಗಿನ ಸೊಲ್ಲಾ ಪುರ ಪಟ್ಟಣವಾಗಿದೆ. ಅಮುಗಿದೇವನ ಹೆಂಡತಿಯು ಹೆಸರು ವರದಾನಿ

---

(೧) ಮೂಲ ಬಸವಪುರಾಣ. ( ಲಿಂಗಸುಗೂರಿನಲ್ಲಿ ನಮಗೆ ದೊರೆದ ಹಸ್ತಲಿಖಿತ ಗ್ರಂಥ. )

ಯಮ್ಮನು. ಉಭಯತರು ವೀರಶೈವಾಚಾರನಿರತರೂ ಇಷ್ಟಲಿಂಗದಲ್ಲಿ ಪೂರ್ಣ ಭಕ್ತಿಯುಳ್ಳವರೂ ಆಗಿ ಇಷ್ಟಲಿಂಗಧಾರಕರನಲ್ಲದೆ ಇತರರನ್ನು ಅವರು ಸೇವಿಸರು. ಅಮುಗಿದೇವನ ಇಷ್ಟದೇವತೆಯು ಸಿದ್ಧಸೋಮ ನಾಥಲಿಂಗವು. ಈ ಲಿಂಗದ ದೇವಾಲಯವು ಭೀಮಾತೀರದಲ್ಲಿರುವ ಈಗಿನ ಪುಳೂಜ ಗ್ರಾಮವಾಗಿತ್ತು. ಇದು ಆ ಕಾಲದಲ್ಲಿ ಅತ್ಯಂತ ಪ್ರಸಿದ್ಧ ದೇವಾಲಯವು. ಈ ಪುಳುಜ ಗ್ರಾಮವು ವಿಜಾಪುರ ಪಟ್ಟಣ ದಿಂದ ಉತ್ತರಕ್ಕೆ ೪೫ ಮೈಲು ಮತ್ತು ಸೊಲ್ಲಾಪುರದ ಪಶ್ಚಿಮಕ್ಕೆ ೨೮ ಮೈಲುಗಳ ಮೇಲೆ ಇದೆ.

ಹೀಗೆ ಅಮುಗಿದೇವನು ಶಿವಾನುಭವಿಯಾಗಿ ಸೊನ್ನಲಿಗೆಯಲ್ಲಿ ವಾಸಮಾಡುತ್ತಿರಲು ಅದೇ ಗ್ರಾಮದಲ್ಲಿ ಸಿದ್ಧರಾಮೇಶ್ವರನು ಕಪಿಲ ಸಿದ್ಧಮಲ್ಲಿಕಾರ್ಜುನನ ಭಕ್ತನಾಗಿ ತನ್ನ ಯೋಗಬಲದಿಂದ ಅನೇಕ ಸಿದ್ಧಿ ಗಳನ್ನು ಸಂಪಾದಿಸಿಕೊಂಡು ಅತ್ಯಂತ ಘನತೆಯನ್ನು ಹೊಂದಿದವನಾಗಿ ದ್ದನು. ಅವನು ಒಂದು ದಿವಸ ಮಲ್ಲಿಕಾರ್ಜುನನ ಪರ್ವವನ್ನು ಮಾಡ ಬೇಕೆಂದೆಣಿಸಿ ಈ ಕಾರ್ಯಕ್ಕೋಸ್ಕರ ವಿಶೇಷ ಸನ್ನಾಹಗಳನ್ನು ಸಂಗ್ರಹಿಸಿ, ಅವನು ಅವುಗಳನ್ನು, ತಾನು ಗ್ರಾಮದ ಅಧಿಪತಿಯಾದದ್ದರಿಂದ, ಗ್ರಾಮ ದಲ್ಲಿಯ ಜನರ ಕಡೆಗೆ ಸರಿಯಾಗಿ ಸಿದ್ಧಪಡಿಸಲು ತನ್ನ ಸೇವ ಕರ ಕಡೆಯಿಂದ ಹೇಳಿ ಕಳಿಸಹತ್ತಿದನು. ಅವನ ಹೇಳಿಕೆಯಂತೆ ಅವನ ಸೇವಕರು ಹತ್ತಿ ಕೊಳಗ ಬತ್ತವನ್ನು ಅಮುಗಿದೇವನ ನಿಳಯದ ಮುಂದೆ ಕುಟ್ಟುವದಕ್ಕೆಂದು ಬಿಟ್ಟಿಯ ಕೊಟ್ಟಣವಾಗಿ ತಂದಿಟ್ಟರು. ಆದರೆ ಅಮುಗಿದೇವನು ಅವರಿಗೆ— ಸಿದ್ಧರಾಮೇಶ್ವರನು ಇಷ್ಟಲಿಂಗಧಾರಕನಲ್ಲ. ಅವನು ಭವಿಯು. ಅವನ ಸೇವೆಯನ್ನು ನಾನು ಮಾಡುವದಿಲ್ಲ. ಈ ಬತ್ತವನ್ನು ನೀವು ಹಿಂದಿರುಗಿ ತೆಗೆದುಕೊಂಡು ಹೋಗಿರಿ, ಎಂದು ಹೇಳಲು ಅವರು ಅದನ್ನು ಕೇಳದೆ ಬಲುಮೆಯಿಂದ ಅದನ್ನು ಅವನ ಮನೆಯ ಮುಂದೆ ಸುರುವಿದರು. ಆಗ ಅಮುಗಿದೇವನು ಅವರ ಇದಿರಿನಲ್ಲಿಯೇ ಅದನ್ನೆಲ್ಲ ತಿಪ್ಪೆಗೆ ಹಾಕಿಸಿ ಬಿಟ್ಟನು.

ಆಗ ಸೇವಕರು ಅಮುಗಿದೇವನು ಹೀಗೆ ಮಾಡಿದ್ದನ್ನು ಸಿದ್ಧ ರಾಮನಿಗೆ ಹೇಳಲು ಅವನು ಅತ್ಯಂತ ಕೋಪಗೊಂಡು— ನಾನು ಸರ್ವಾಂಗಲಿಂಗಿ. ನನ್ನ ರೋಮಗಳೆಲ್ಲವೂ ಲಿಂಗಾಂಗಗಳಾಗಿವೆ. ನನ್ನಂಥ

ವನಿಗೆ ಇಷ್ಟಲಿಂಗವೆಂಬುದೊಂದು ಬೇರೊಂದು ಲಿಂಗವೇ? ನನಗೆ ಇವನು ಹೀಗೆ ನುಡಿಯಬೇಕೇ? ಎಂದಂದು ಸೇವಕರಿಗೆ— ನಮ್ಮ ಊರೊಳಗೆ ನೀನು ಇರಬೇಡವೆಂದು, ಅಮುಗಿದೇವನಿಗೆ ಹೇಳಿಬನ್ನಿ ರೆಂದು ಅವರನ್ನು ಕಳುಹಿದನು. ಅವರು ಅದೇ ವೇಗೆ ಅವನ ಲ್ಲಿಗೆ ಬಂದು ತಿಳುಹಿದರು. ಆಗ ಶಿವಶರಣನಾದ ಅಮುಗಿದೇವನು— ನಾನು ಇನ್ನುಮೇಲೆ ಈ ಗ್ರಾಮದಲ್ಲಿ ಇರಕೂಡದು, ಕಲ್ಯಾಣಕ್ಕೆ ಹೋಗ ಬೇಕೆಂದು ನಿಶ್ಚಯಿಸಿ ತನ್ನ ಮನೆಯಲ್ಲಿದ್ದ ನೇಗೆಯ ಮುಟ್ಟುಗಳನ್ನೂ ಭಾಂಡ ಭಾಜನಗಳನ್ನೂ ಗೃಹಸಾಧನೆಗಳನ್ನೂ ಕೂಡಿಸಿ ಕಟ್ಟಿದನು. ಅವು ಮೂರು ಹೊರೆಗಳಾದವು. ಅವುಗಳಲ್ಲಿ ಒಂದನ್ನು ತಾನು, ಮತ್ತೊಂ ದನ್ನು ತನ್ನ ಹೆಂಡತಿ, ಹೀಗೆ ಹೊತ್ತುಕೊಂಡು ಹೊರಡಲನುವಾದರು. ಆದರೆ ಮೂರನೆಯ ಹೊರೆಯು ಅಲ್ಲಿಯೇ ಉಳಿಯಿತು. ಆಗ ಅವನ ಸತಿಯು ಗಂಡನಿಗೆ— ಈ ಮೂರನೆಯದನ್ನು ಯಾರು ಹೊತ್ತುತರು ವರು ಎಂದು ಕೇಳಲು, ಅಮುಗಿದೇವನು— ಶಿವನು ತಾನೇ ಹೊತ್ತು ಕೊಂಡು ಬರುವನು. ಬಾರದಿದ್ದರೆ, ಅವನ ಹೊರೆ ಅವನಲ್ಲಿಯೇ ಇರಲಿ, ಎಂದು ಹೇಳಿ ಕಲ್ಯಾಣಕ್ಕೆ ಉಭಯತರು ಕಾಲುನಡಿಗೆಯಿಂದಲೇ ಹೊರಟರು. ಕಲ್ಯಾಣವು ಸೊನ್ನಲಿಗೆಯಿಂದ ಪೂರ್ವಕ್ಕೆ ಸರಳರೇಷೆ ಯಲ್ಲಿ ೮೦ ಮೈಲು ದೂರವಿದೆ. ಅವರು ಕಲ್ಯಾಣಕ್ಕೆ ಸಮೀಪವಿದ್ದ ಶಿವಪುರವೆಂಬ ಗ್ರಾಮಕ್ಕೆ ಬಂದು ಮುಟ್ಟಿದರು. ಆಗ ಅಲ್ಲಿ ಅವರು ಬಂದು ನೋಡುತ್ತಾರೆಯೇ, ಅಲ್ಲಿ ಅವರ ಮೂರನೆಯ ಗಂಟು ಬಂದು ಬಿದ್ದಿತ್ತು! ಇದು ಪರಮಾತ್ಮನ ಅನುಗ್ರಹವು, ಆದ್ದರಿಂದ ಕೆಲವು ದಿನ ಇಲ್ಲಿಯೇ ಇರಬೇಕೆಂದು ಬಯಸಿ ಅವರು ತಮ್ಮ ಗಂಟುಗಳನ್ನು ಅದೇ ಗ್ರಾಮದಲ್ಲಿ ಇಳಿಸಿದರು. ಮತ್ತು ಅಲ್ಲಿಯೇ ಅವರು ತಮ್ಮ ಕಾಯಕ ವನ್ನು ನಡಿಸುತ್ತ ದಾಸೋಹದಲ್ಲಿ ಇರಹತ್ತಿದರು.

ಹೀಗಿರಲು ಅಮುಗಿ ದೇವನು ಸೊನ್ನಲಿಗೆಯನ್ನು ಬಿಟ್ಟ ಮರು ದಿನ ಸಿದ್ಧರಾಮೇಶ್ವರನು ಕಪಿಲ ಸಿದ್ಧಮಲ್ಲಿಕಾರ್ಜುನನ ಪರ್ವ ಮಾಡ ಬೇಕೆಂದು ದೇವರ ಎಣ್ಣೆ ಮಜ್ಜನವನ್ನು ಆರಂಭಿಸಿದನು. ಆಗ ದೇವರ ಮೂರ್ತಿಯೊಳಗಿಂದ—ನನ್ನ ತಲೆಯನ್ನು ಮುಟ್ಟಬೇಡ, ನೋವುತ್ತಿದೆ ಸಿದ್ಧರಾಮಯ್ಯ, ಎಂಬ ಶಬ್ದಗಳು ಹೊರಟವು. ಅವುಗಳನ್ನು ಸಿದ್ಧ ರಾಮೇಶ್ವರನು ಕೇಳಿ ಚಕಿತನಾಗಿ, ಇದಕ್ಕೆ ಕಾರಣವೇನೆಂದು ಕೇಳಲು,

ಅದಕ್ಕೆ ಕಪಿಲ ಸಿದ್ಧಮಲ್ಲಿಕಾರ್ಜುನನು—ನಾನು ಅಮುಗಿ ದೇವನ ಹೊರೆಯನ್ನು ಹೊತ್ತುಕೊಂಡು ಹೋಗುವಲ್ಲಿ ಅದರ ಭಾರವು ನನಗೆ ಬಿಟ್ಟಿದಂತಾಯಿತ್ತು. ಅವನು ಊರನ್ನು ಬಿಟ್ಟು ಹೋಗುವಾಗ ಆ ಹೊರೆಯನ್ನು ನನ್ನ ವಶಕ್ಕೆ ಕೊಟ್ಟು ಹೋದನು. ಭಕ್ತನ ಸಂಸಾರವು ನನಗೆ ಬಹಳ ಭಾರವಾಗಿ ನನ್ನ ಗೋಣು ಈಗ ನೋಯುತ್ತಿದೆ. ಈ ನೋವಿಗೆ ನೀನೇ ಕಾರಣ, ಎಂದು ಸಿದ್ಧರಾಮನಿಗೆ ಹೇಳಿದನು. ಆಗ ಸಿದ್ಧರಾಮನು—ನಿಮ್ಮ ಶಿರದಲ್ಲಿ ಚಂದ್ರ, ಗಂಗೆ, ಮಹಾಶೇಷ ಇಂಥವರು ಇದ್ದು ಅವರು ನಿಮಗೆ ಭಾರವಾಗಲಿಲ್ಲ. ಪಿಟ್ಟವ್ವೆಗೆ ಆಳಾಗಿ ನೀವು ಅವಳಿಗಾಗಿ ಕಟ್ಟೆಗೆ ಮಣ್ಣು ಹೊತ್ತಿರಿ, ಅದರಿಂದಲೂ ನಿಮಗೆ ನೋವಾಗಲಿಲ್ಲ. ಆದರೆ ಈಗ ನೋವಾಯಿತೇ? ಎಂದು ಮರುಗಿ, ಅಮುಗಿದೇವಯ್ಯನು ಮಹಾ ಶಿವಶರಣನು, ಅವನಿಗೆ ನಾನು ಅಪರಾಧವನ್ನು ಮಾಡಿದೆನು ಎಂಬ ಅರಿವು ಅವನಲ್ಲಿ ಉಂಟಾಗಿ ಅವನು— ನನ್ನಿಂದ ಬಹಳ ತಪ್ಪಾಯಿತು. ಅಮುಗಿದೇವನನ್ನು ಕರೆತರುವೆ ಎಂದು ಅವನಿದ್ದಲ್ಲಿಗೆ ಹೊರಟನು. ಅಮುಗಿದೇವನು ಇನ್ನೂ ಶಿವಪುರದಲ್ಲಿದ್ದನು. ಸಿದ್ಧರಾಮೇಶ್ವನು ಅವನನ್ನು ಅಲ್ಲಿ ಕಂಡು—ನನ್ನಿಂದ ತಪ್ಪಾಯಿತು. ಸೊನ್ನಲಿಗೆಗೆ ಬರಬೇಕೆಂದು ಕೇಳಿಕೊಂಡನು. ಆದರೆ ಅಮುಗಿದೇವನು— ನೀನು ಲಿಂಗಿಯಲ್ಲ. ಆದ್ದರಿಂದ ನಾನು ಹಿಂದಕ್ಕೆ ನಿನ್ನ ಊರಿಗೆ ಬರುವವನಲ್ಲ ಎಂದು ನುಡಿದನು. ಆಗ ಸಿದ್ಧರಾಮನು ತಿರುಗಿ ಸೊನ್ನಲಾಪುರಕ್ಕೆ ಬಂದು ಕಪಿಲ ಸಿದ್ಧಮಲ್ಲಿಕಾರ್ಜುನನಲ್ಲಿ ಅಮುಗಿದೇವಯ್ಯನು ನುಡಿದದ್ದನ್ನು ನಿವೇದಿಸಿಕೊಂಡನು. ಆಗ ಕಪಿಲ ಸಿದ್ಧಮಲ್ಲಿಕಾರ್ಜುನನು ಜಂಗಮ ರೂಪತಾಳಿ ಸಿದ್ಧರಾಮನಿಗೆ ಲಿಂಗಧಾರಣೆಯನ್ನು ಮಾಡಿದನು. ಆ ಮೇಲೆ ಸಿದ್ಧರಾಮನು ಅಮುಗಿದೇವನನ್ನು ಕರೆತರಲಿಕ್ಕೆ ಹೋದನು. ಅಮುಗಿದೇವನು ಸಿದ್ಧರಾಮನನ್ನು ಕಂಡು ಅವನನ್ನು ಅತ್ಯಂತ ಪ್ರೀತಿಯಿಂದ ಸತ್ಕರಿಸಿದನು. ಆಮೇಲೆ ಅವನಿಗೆ—ಸಿದ್ಧರಾಮನೇ ನಾನು ನಿನಗೆ ಪ್ರೀತನಾದೆನು. ಆದರೆ ನಾನು ಕಲ್ಯಾಣಕ್ಕೆ ಹೋಗುವೆನು. ಅಲ್ಲಿ ಬಸವಾದಿ ಪ್ರಮಥರಿದ್ದಾರೆ. ಅವರ ಶಿವಾನುಭವ ಗೋಷ್ಠಿಯಲ್ಲಿರುವೆನು. ನನ್ನಂತೆಯೇ ನೀನೂ ಕಾಲ ಕಾಲಕ್ಕೆ ಅಲ್ಲಿಗೆ ಬಂದು ಶಿವಾನುಭವದ ತಿಳಿವನ್ನು ಹೊಂದು. ಇಷ್ಟಲಿಂಗಾರ್ಚನೆಯಲ್ಲಿ ತ್ರಿಲಿಂಗಗಳ ರೀತಿಯನ್ನು ಬಸವಾದಿ ಪ್ರಮಥರಿಂದರಿ ಎಂದು ಹೇಳಿ ಅವನನ್ನು ಸಂತವಿಸಿ ಸೊನ್ನಲಿಗೆಗೆ ತಿರುಗಿ ಕಳಿಸಿದನು.

ಆನೇಲೆ ಅಮುಗಿದೇವನು ಶಿವಪುರವನ್ನು ಬಿಟ್ಟು ಕಲ್ಯಾಣಕ್ಕೆ ಬಂದು ಅಲ್ಲಿ ತನ್ನ ನೆಯ್ಗೆಯ ಕಾಯಕವನ್ನು ಮಾಡುತ್ತ ತನ್ನ ದಾಸೋಹ ಕಾರ್ಯದಲ್ಲಿರಹತ್ತಿದನು. ಅವನು ಶಿವಶರಣರಲ್ಲಿ ಅತ್ಯಂತ ಜ್ಞಾನಿಯು. ಅವನು ಬಸವೇಶ್ವರನ ಶಿವಾನುಭವಮಂಟಪದಲ್ಲಿದ್ದು ಕೊಂಡು ಶಿವಾನುಭವ ಗೋಷ್ಠಿಯಲ್ಲಿ ಕಾಲಕಳೆಯಹತ್ತಿದನು. ಶಿವಾನು ಭವ ಮಂಟಪದ ಚರ್ಚೆಗಳಲ್ಲಿ ಅವನ ಹೆಸರಿಲ್ಲದಂಥ ಯಾವ ಚರ್ಚೆಯೂ ಶಿವಾನುಭವವಾದ ವಿವಾದ ಗ್ರಂಥಗಳಲ್ಲಿ ದೊರಕಲಾರದು. ಶಿವಶರಣರಲ್ಲಿ ಅವನ ಮಹತ್ವವು ಬಹಳವಿದೆ.

ಅಮುಗಿದೇವನು ಉಚ್ಚ ತರಗತಿಯ ವಚನಕಾರನಿದ್ದಾನೆ. ನಮಗೆ ದೊರೆತ ಅವನ ೧೬ ವಚನಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಮಾದಿ ರಿಗಾಗಿ ಈ ಚರಿತ್ರೆಯ ಅಂತ್ಯದಲ್ಲಿ ಕೊಟ್ಟಿದ್ದೇವೆ. ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಹೀಗೆ ಅವನು ವೀರಶೈವರಲ್ಲಿ ಅತ್ಯಂತ ಪೂಜ್ಯಸ್ಥಾನನ್ನು ಹೊಂದಿದ್ದಾನೆ.

ಮುಂದೆ ಅಮುಗಿದೇವನು ಹರಳಯ್ಯ ಮಧುವಯ್ಯಗಳ ವಧೆಯ ವರೆಗೂ ಅಂದರೆ ಕ್ರಿ॥ ಶ. ೧೧೬೮ ರ ವರೆಗೆ ಕಲ್ಯಾಣ ಪಟ್ಟಣದಲ್ಲಿ ಕಾಲಕಳೆದನು.

ಹರಳಯ್ಯ ಮಧುವಯ್ಯಗಳು ಬಿಜ್ಜಳನಿಂದ ವಧಿಸಲ್ಪಟ್ಟಿದ್ದರಿಂದ ಕಲ್ಯಾಣದಲ್ಲಿ ಒಂದು ಮಹತ್ತರವಾದ ಕ್ಷೋಭವು ಉಂಟಾಯಿತು. ಆದರಿಂದ ಪಟ್ಟಣವು ಹಾಳಾಯಿತು. ಆಗ ಅಮುಗಿದೇವನು ಪಟ್ಟ ಣವನ್ನು ಬಿಟ್ಟು ತನ್ನ ಇಷ್ಟ ದೇವತೆಯಾದ ಸಿದ್ಧ ಸೋಮನಾಥನ ದೇವಾಲಯವಿದ್ದ ಪುಳುಜ ಗ್ರಾಮಕ್ಕೆ ಬಂದು ಅಲ್ಲಿಯೇ ಶಿವಾನುಭ ವದಲ್ಲಿ ಕಾಲ ಕಳೆಯಹತ್ತಿದನು.

ಈ ಪುಳುಜ ಗ್ರಾಮದಲ್ಲಿ ಅಮುಗಿದೇವನು ಸುಮಾರು ೩೦ ವರ್ಷ ಗಳನ್ನು ಕಳೆದಿರಬಹುದು. ಈ ಅವಧಿಯಲ್ಲಿ ಕಲಚೂರ್ಯ ಬಿಜ್ಜಳನ ವಂಶವು ೧೧೮೩ ರ ವರೆಗೆ ನಡೆದು ಅದು ನಷ್ಟವಾಯಿತು. ಆ ಮೇಲೆ ಪುನಃ ಚಾಲುಕ್ಯರ ರಾಜ್ಯವು ಸ್ಥಾಪಿತವಾಗಿ ಅದು ಆರು ವರ್ಷ ಮಾತ್ರ ನಡೆಯಿತು. ೧೧೮೭ ರಿಂದ ೧೧೯೧ ವರೆಗೆ ರಾಜ್ಯವಾಳಿದಂಥ ದೇವಗಿರಿಯ ಯಾದವರಾಜನಾದ ಭಿಲ್ಲಮನು ಕರ್ನಾಟಕವನ್ನು ಅಭಿಯೋ

ಗಿಸಿ ವಿಜಾಪುರ ಪ್ರಾಂತವನ್ನು ಕೈವಶಮಾಡಿಕೊಂಡನು. ಅವನ ತರುವಾಯ ಅವನ ಮಗನಾದ ಜೈತುಗಿಯು ೧೧೯೧ ರಿಂದ ೧೨೧೦ ರ ವರೆಗೆ ರಾಜ್ಯವಾಳಿದನು. ಅವನ ಕಾಲದಲ್ಲಿ ಅವನ ಅತ್ಯಂತ ಸಮರ್ಥನೂ ಶೂರನೂ ಆದ ಅವನ ಮಗ ಸಿಂಘಣನು ಇಡೀ ಉತ್ತರ ಕರ್ನಾಟಕ ಪ್ರಾಂತವನ್ನು ತನ್ನ ಕೈವಶಮಾಡಿಕೊಂಡನು. ಅವನು ೧೧೯೯ ರಲ್ಲಿ ವಿಜಾಪುರ ಪ್ರಾಂತದಲ್ಲಿ ಬಂದಾಗ್ಗೆ ಪುಳುಜ ಗ್ರಾಮದಲ್ಲಿ ವಾಸವಾಗಿದ್ದ ಅಮುಗಿದೇವನ ಖ್ಯಾತಿಯನ್ನು ಕೇಳಿ ಅವನನ್ನು ಕಾಣಬೇಕೆಂದು ತನ್ನ ಸೈನ್ಯದೊಂದಿಗೆ ಅವನಲ್ಲಿಗೆ ಬಂದನು. ಅವನನ್ನು ಕಂಡು ಅತ್ಯಂತ ಪ್ರೀತನಾಗಿ ಸಿದ್ಧಾರ್ಥಿಸಂವತ್ಸರದ ಮಾಘ ಶು॥ ೧೧ ನೇ ದಿವಸ ದೇವತಾರ್ಚನೆಯ ಸಮಯದಲ್ಲಿ "ಶ್ರೀ ಸ್ವಯಂಭು ಸಿದ್ಧ ಸೋಮನಾಥದೇವರ್ಗಂದಾ ಯಿಥ್ಥಿಯುವನು ಸರ್ವನಮಶ್ಯವಾಗಿ ಅಮ್ಮುಗಿದೇವರಸರ್ಗೆ ಅಕರ ಪರಿಹಾರವಾಗಿ ಧಾರಾಪೂರ್ವಕಂ ಮಾಡಿಕೊಟ್ಟರು" ಎಂದು ಅಲ್ಲಿಯ ಶಿಲಾಶಾಸನದಲ್ಲಿ ಹೇಳಿದೆ. ಹೀಗೆ ಅಮುಗಿದೇವಯ್ಯನಿಗೆ ಅರಸನು ಇಥ್ಥಿ ಗ್ರಾಮವನ್ನು ಉಂಬಳಿ ಹಾಕಿ ಕೊಟ್ಟನು. ಅಲ್ಲದೆ ಅವನು ದೇವಾಲಯಕ್ಕೂ ಬಹಳ ಭೂದಾನವನ್ನು ಮಾಡಿದನು. ಹಾಗೆಯೇ ಸಿಂಘಣನ ಕೈಕೆಳಗಿನ ಅಧಿಕಾರಿಗಳಾದ ಸಾಹಣಿ ಕುಮಾರ, ಸೋಯಿದೇವ, ಗಂಗಿದೇವ, ಸಂಕಮದೇವ, ಬಿಜ್ಜನಾಣ, ರವಿಯದೇವ, ಜೋಯಿದೇವ ಇವರೂ ಸಹ ದೇವಾಲಯಕ್ಕೆ ದಾನಕೊಟ್ಟರು. ಇದು ಅಲ್ಲಿದ್ದ ಶಿಲಾಶಾಸನದಿಂದಲೇ ತಿಳಿದು ಬರುತ್ತದೆ.[೧] ಈ ಶಾಸನದ ವರ್ಷ ಕ್ರಿ॥ ಶ॥ ೧೧೯೯ ಇರುತ್ತದೆ.

ಅಮುಗಿದೇವನಿಗೆ ಕೊಟ್ಟ ಇಥ್ಥಿ ಗ್ರಾಮವು ಪುಳುಜ ಗ್ರಾಮದ ಪಶ್ಚಿಮಕ್ಕೆ ೨ ಮೈಲುಗಳ ಮೇಲೆ ಈಗಿನ 'ಇಟಿ ಎಂಬ ಹೆಸರಿನ ಗ್ರಾಮವಿರುತ್ತದೆ. ಈಗ ಪುಳೂಜ ಎಂಬ ಹೆಸರಿದ್ದ ಗ್ರಾಮವು ಶಿಲಾಶಾಸನದ ಸಂಸ್ಕೃತ ಭಾಗದಲ್ಲಿ 'ಪೂರ್ಣಜಾ' ಎಂತಲೂ ಕನ್ನಡ ಭಾಗದಲ್ಲಿ 'ಹೂಳಜೆ' ಎಂತಲೂ ಕರೆಯಲ್ಪಟ್ಟಿದೆ.

ಈ ಶಾಸನರಲ್ಲಿ ಅಮುಗಿದೇವನು 'ಶಿವಾಚಾರ್ಯೈಕನಿರತ, ಲಿಂಗೈಕ್ಯ, ಲಿಂಗವೇದಕ' ಎಂತಲೂ 'ಮಾಹೇಶ್ವರಗಣ ಕುಲಾನ್ವಯದಿವಾಕರ'

---

(೧) ಇದು ಶಿವಾನುಭವ ಪತ್ರಿಕೆ ೯—೬—೪೦೧ ಇದರಲ್ಲಿ ಪ್ರಕಟವಾಗಿದೆ.

ಎಂತಲೂ ' ಭಕ್ತಜನ ಚಿಂತಾಮಣಿ ' ಎಂತಲೂ ' ಶ್ರೀ ಸಿದ್ಧ ಸೋಮನಾಥದೇವ ಶ್ರೀಪಾದಪಂಕಜ ಭ್ರಮರ ಲಿಂಗೈಕದೇಹಿ ' ಎಂತಲೂ, ' ಶರಣ ಸಂತಾನ ' ಎಂತಲೂ ಉಲ್ಲೇಖಿಸಲ್ಪಟ್ಟಿದ್ದಾನೆ. ಈ ಪ್ರಕಾರ ಈ ಶಿಲಾಶಾಸನದಲ್ಲಿ ಅಮುಗಿದೇವನು ಸಿಂಘಣನಿಂದ ಅನೇಕ ರೀತಿಯಿಂದ ಹೊಗಳಿಸಿಕೊಂಡಿದ್ದಾನೆ. ಈ ಶಾಸನದಿಂದ ಅಮುಗಿದೇವನು ಕೇವಲ ಕಾಲ್ಪನಿಕ ಮನುಷ್ಯನಿರದೆ ಬಸವೇಶ್ವರನ ಕಾಲದಲ್ಲಿ ನಿಜವಾಗಿ ಆಗಿ ಹೋದ ಅತ್ಯಂತ ಖ್ಯಾತಿಯನ್ನು ಹೊಂದಿದ ಶಿವಶರಣನೆಂಬುದು ತಿಳಿದು ಬರುತ್ತಿದೆ.

## ವಚನಗಳು.

(೧) ಶಿವನ ನೆನೆದರೆ ಭವ ಹರಿವುದೆಂಬ ವಿವರಗೇಡಿಗಳ ಮಾತ ಕೇಳಲಾಗದು. ಅದೇನು ಕಾರಣವೆಂದರೆ, ಜ್ಯೋತಿಯ ನೆನೆದರೆ ಕತ್ತಲೆ ಹರಿವುದೇ? ಮೃಷ್ಟಾನ್ನವ ನೆನೆದರೆ ಹೊಟ್ಟೆ ತುಂಬುವುದೇ ? ರಂಭೆಯ ನೆನೆದರೆ ಕಾಮದ ಕಳವಳ ಹಿಂಗುವದೇ ? ನೆನೆದರಾಗದು. ನಿಜದಲ್ಲಿ ನಿಂದು ನಿರ್ಧರಿಸದನ್ನಕ್ಕ ಸದ್ಗುರು ಸಿದ್ಧ ಸೋಮನಾಥನೆಂಬ ಲಿಂಗವ ನೆನೆಯಬಾರದು.

(೨) ಅಲಗಿನ ಮೊನೆಯನೇರಬಹುದು. ಹುಲಿಯ ಬಿಲವ ಹೊಗಬಹುದು. ಸಿಂಗದ ಕೊರಳಿಗೆ ಹಾಯಬಹುದು. ಸಿದ್ಧ ಸೋಮನಾಥ ನಿಮ್ಮ ಮುಂದೆ ಮನ ಸಹಿತ ನಿಮಿಷ ಕುಳ್ಳಿರಲಾಗದು.

(೩) ಮಂಗಳಮಣ್ಣ ಬೆರಿಸಿದಂತೆ, ಗಾಳಿಯ ದೂಳು ಹತ್ತದಂತೆ, ಬಿಸಿಲು ಮಳೆಯಲ್ಲಿ ನೆನೆಯದಂತೆ, ಬಯಲು ಮೂರ್ತಿಗೊಳ್ಳದಂತೆ ಸಿದ್ಧ ಸೋಮನಾಥ ನಿಮ್ಮ ಶರಣನೆಲ್ಲಿಯೂ ಬಳಸಿ ಬಳಸದಂತಿಪ್ಪನು.

(೪) ಇಹಪರನಲ್ಲ. ಪರಾಪರನಲ್ಲ. ಕಾಮಿಸಿ ಕಾಮಿಯಲ್ಲ. ಭಾವಿಸಿ ಭಾವಿಯಲ್ಲ, ಅನಾಯಾಸ ನಿರಂಜನನು. ಸಿದ್ಧ ಸೋಮನಾಥಲಿಂಗ ನಿಮ್ಮ ಶರಣ ಬಳಸಿಯೂ ಬಳಸುವವನಲ್ಲ.

(೫) ಹುಡಿ ಹತ್ತದ ಗಾಳಿಯಂತೆ, ಕಾಡಿಗೆ ಹತ್ತದ ಆಲಿಯಂತೆ, ನೆಯಿ ಹತ್ತದ ನಾಲಿಗೆಯಂತೆ, ಮಂಗಲ ಮಣ್ಣ ಬೆರಿಸದಂತೆ ಸಿದ್ಧ ಸೋಮನಾಥ ನಿಮ್ಮ ಶರಣನು ಸಕಲ ಸುಖಂಗಳ ಸುಖಿಯಿಸಿ ಬೇರಿಪ್ಪನು.

(೬) ಆಲಿಕಲ್ಲ ಕಡಿದು ಪುಥ್ಥಳಿಯ ಖಂಡಿಸುವಂತೆ, ಉಪ್ಪಿನ ಪಟ್ಟಣವನುದಕದಲ್ಲಿ ಅದ್ದುವಂತೆ, ಕರ್ಪುರದ ಪ್ರಣುತೆಯಲ್ಲಿ ಜ್ಯೋತಿಯ ಬೆಳಗುವಂತೆ ಸಿದ್ಧ ಸೋಮನಾಥ ಲಿಂಗಗ್ರಾಹಿಯವಗ್ರಾಹಿಯಾಗಿ.

---

## ರಾಯಮ್ಮ.

ರಾಯಮ್ಮನು ರಾಯಸದ ಮಂಚಣ್ಣನ ಪತ್ನಿಯು. ಈ ಉಭಯತರೂ ವಚನಕಾರರಿದ್ದಾರೆ. ರಾಯಮ್ಮನು ಬಸವೇಶ್ವರನ ಸಮ್ಮುಖದಲ್ಲಿ ನಡೆಯುತ್ತಿದ್ದ ಶಿವಾನುಭವ ಗೋಷ್ಠಿಗಳನ್ನು ಆಲಿಸುತ್ತ ಶಿವಶರಣೆ ಎಂದು ಹೆಸರಾದಳು. ಆ ಕಾಲದಲ್ಲಿ ಅನೇಕ ಶಿವಶರಣರು ಒತ್ತಟ್ಟಿಗೆ ನೆರೆದು ಧರ್ಮಚರ್ಚೆ ಮಾಡುತ್ತಿರುವಾಗ ಕೆಲವೊಬ್ಬ ಶರಣನು ಅಥವಾ ಶರಣೆಯು ಇನ್ನೊಬ್ಬ ಶಿವಶರಣನ ವಿಚಾರಗಳನ್ನು ಕೇಳಿ ಅವನಿಗೆ ಭಕ್ತಿಯನ್ನು ತಾಳಿ ಅವನಿಗೆ ಶಿಷ್ಯತ್ವವನ್ನು ವಹಿಸಿ ಅವನೇ ತನ್ನ ಗುರುವು ಅಥವಾ ಇಷ್ಟಲಿಂಗವು ಎಂದು ಭಾವಿಸಿ ಅವನ ಹೆಸರನ್ನೇ ತನ್ನ ಮುದ್ರಿಕೆಯನ್ನಾಗಿ ಇಟ್ಟುಕೊಂಡು ವಚನಗಳನ್ನು ರಚಿಸಿದ್ದು ಕಂಡು ಬರುತ್ತದೆ. ಎಡೆಮಠದ ನಾಗಿದೇವನ ಹೆಂಡತಿಯಾದ ಮಸಣ್ಣಮ್ಮನು ನಿಜಗುಣನ ಹೆಸರಿನಿಂದ ಮತ್ತು ಕಾಳವ್ವೆಯು ತನ್ನ ಗಂಡನಾದ ಉರಿಲಿಂಗ ಪೆದ್ದಿಯ ಹೆಸರಿನಿಂದ ವಚನಗಳನ್ನು ರಚಿಸಿದ್ದಾರೆ. ಹಾಗೆಯೇ ರಾಯಮ್ಮನು ಅಮುಗಿದೇವನ ಹೆಸರಿನಿಂದ ವಚನಗಳನ್ನು ರಚಿಸಿದ್ದಾಳೆ. ಅವಳ ಮೂರು ವಚನಗಳು ಮಾತ್ರ ನಮಗೆ ಉಪಲಬ್ಧವಿದ್ದು ಅವುಗಳನ್ನು ನಾವು ಕೆಳಗೆ ಕೊಟ್ಟದ್ದೇವೆ.

(೧) ವಿಶ್ವಮಯರೂಪಾಗಿ ಬಂದೆಯಯ್ಯ. ಭಕ್ತಿಗೆ ಎನ್ನ ಮನಕ್ಕೆ ಸಲೆಸಂದ ನಿಲವು, ಅಮುಗೇಶ್ವರ ಲಿಂಗಕ್ಕೆ ಮಾಟವಾಯಿತ್ತು.

ಟೀಪು:— ಶಿವಶರಣನಾದ ಅಮುಗಿದೇವಯ್ಯನಿಗೆ ಉದ್ದೇಶಿಸಿಯೇ ರಾಯಮ್ಮನು ನುಡಿದ ವಚನವು ಇದಾಗಿದೆಂದು ತೋರುತ್ತದೆ. 'ಭಕ್ತಿಗೆ ಎನ್ನ ಮನಕ್ಕೆ ಸಲೆಸಂದ ನಿಲವು' ಮತ್ತು ಈ ನಿಲವು 'ಅಮುಗೇಶ್ವರ ಲಿಂಗಕ್ಕೆ ಮಾಟವಾಯಿತ್ತು' ಎಂದು ಹೇಳಿಕೊಂಡಿದ್ದರಿಂದ ಅಮುಗಿದೇವನಿಂದ ಈಕೆಯು ದೀಕ್ಷೆಯನ್ನು ಹೊಂದಿರಬೇಕೆಂದು ಊಹಿಸಬಹುದಾಗಿದೆ. ದೀಕ್ಷೆ ಎಂದರೇನು, ದೀಕ್ಷಾಕಾಲದಲ್ಲಿ ಗುರು ಮತ್ತು

ಶಿಷ್ಯ ಇವರಲ್ಲಿರತಕ್ಕ ನಿಕಟ ಸಂಬಂಧ ಇವುಗಳನ್ನು ಅತ್ಯಂತ ಭಾವ ಗರ್ಭಿತವಾಗಿ ಈ ವಚನದಲ್ಲಿ ರಾಯಮ್ಮನು ವಿವರಿಸಿದ್ದಾಳೆ.

(೨) ಜ್ಞಾನವೆಂಬುದು ಬೀದಿಯ ಪಸಾರವೇ? ಬೊಕ್ಕಣ ತುಂಬುವ ಹರುಳಿಯೇ? ಚೀಲದೊಳಗಣ ಜೀರಿಗೆಯೇ? ಗಾಣದೊಳಗಣ ಹಿಂಡಿಯೇ? ಜ್ಞಾನವೆಂಬುದು ಎಲ್ಲರೊಡನೆ ಬೀರದಿರಬೇಕು. ಗೆಲ್ಲ ಸೋಲಿನ ಮಾತ ಬಂದಡೆ ಗೆಲವ ನುಡಿಯದಿರಬೇಕು. ಹೀಗಿರಬಲ್ಲರೆ ಶರಣನೆಂಬೆನು, ಅಮುಗೇಶ್ವರ ಲಿಂಗವೆಂಬೆನು.

ಭಾವಃ— ಭಾವವು ಸ್ಪಷ್ಟವಿದೆ. ತಿಳಿದವನ ವರ್ತನೆಯು ಹೇಗಿರಬೇಕೆಂಬುದನ್ನು ಬಹು ಸ್ವಾರಸ್ಯವಾಗಿ ನುಡಿದಿದ್ದಾಳೆ.

(೩) ಅಂಗಕ್ಕಾಚಾರ, ಮನಕ್ಕೆ ಜ್ಞಾನ, ಸಮರಸಾದ್ವೈತವಾದ ಮತ್ತೆ ಪುನರ್ದೀಕ್ಷೆಯುಂಟೇ? ಗರುಡಿಯಲ್ಲಿ ಕೋಲಲ್ಲದೆ ಕಾಳಗದಲ್ಲಿ ಉಂಟೇ ಕೋಲು? ಭವಿಗೆ ಮೇಲುವ್ರತ ಪುನರ್ದೀಕ್ಷೆಯಲ್ಲದೆ ಶರಣರಿಗುಂಟೇ? ವ್ರತತಪ್ಪಿ ಅನುಗ್ರಹವಿಡಿದ ನರಕಿಗಳಿಗೆ ಮುಕ್ತಿ ಇಲ್ಲ ಎಂದೆ ಅಮುಗೇಶ್ವರಲಿಂಗದಲ್ಲಿ.

ಟೀಪುಃ— ಇಲ್ಲಿ ರಾಯಮ್ಮನು ಲಿಂಗಧಾರಿಯಾದ ಬಳಿಕ ಪುನರ್ದೀಕ್ಷೆ ಇಲ್ಲವೆಂತಲೂ ಭವಿಗಳಿಗೆ ಮಾತ್ರ ಪುನರ್ದೀಕ್ಷೆಯುಂಟೆಂತಲೂ ಹೇಳಿದ್ದಾಳೆ. ದೀಕ್ಷೆ ಎಂದರೆ ಗರುಡಿಯಲ್ಲಿ ಕೋಲನ್ನು ಕೊಟ್ಟು ಅವನಿಗೆ ಯುದ್ಧಕಾಲದಲ್ಲಿ ಶಸ್ತ್ರವನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ತಿಳಿಸಿಕೊಟ್ಟಂತೆ ಇರುತ್ತದೆ. ಆದ್ದರಿಂದ ಸರಿಯಾದ ವೀರಶೈವತ್ವದ ವರ್ತನೆಯು ಇರುವ ವರೆಗೆ ಪುನಃ ದೀಕ್ಷೆಯನ್ನು ಮಾಡುವದು ಅವಶ್ಯವಿಲ್ಲೆಂದು ರಾಯಮ್ಮನ ಅಭಿಪ್ರಾಯವಿದೆ.

ರಾಯಮ್ಮನ ಮುದ್ರಿಕೆಯು 'ಅಮುಗೇಶ್ವರ' ಎಂತಲೂ ಆಕೆಯ ಗಂಡನಾದ ರಾಯಸದ ಮಂಚಣ್ಣನ ಮುದ್ರಿಕೆಯು 'ಜಾಂಬೇಶ್ವರಾ' ಎಂತಲೂ ಇವೆ. ವೀರಶೈವ ಧರ್ಮದ ಪ್ರಕಾರ ಸ್ತ್ರೀಪುರುಷರು ಸ್ವತಂತ್ರರಿದ್ದಾರೆ. ಆದ್ದರಿಂದ ಗಂಡನ ಇಷ್ಟದೇವತೆಯನ್ನೇ ಅವನ ಹೆಂಡತಿಯೂ ಸ್ವೀಕರಿಸಬೇಕೆಂದು ನಿಯಮವಿಲ್ಲ. ಅವರವರ ಭಕ್ತಿಯು ಮತ್ತು ವಿಶ್ವಾಸವು ಯಾರಲ್ಲಿರುತ್ತದೋ ಅವರನ್ನೇ ಅವರು ಮನ್ನಿಸಲು ಅವರು ಸ್ವತಂತ್ರರಿದ್ದಾರೆಂಬುದು ಈ ಮುದ್ರಿಕೆಗಳಿಂದ ತಿಳಿದುಬರುತ್ತಿದೆ.

---

# ರಾಯಸದ ಮಂಚಣ್ಣ.

ರಾಯಸದ ಮಂಚಣ್ಣನು ಬಸವೇಶ್ವರನು ಎರಡನೆಯವರಿಗೆ ತಾನು ಹೇಳಿಕಳಿಸುತ್ತಿದ್ದ ಅಭಿಪ್ರಾಯಗಳನ್ನೂ ತನ್ನ ಆಲೋಚನೆಗಳನ್ನೂ ವಿಚಾರಗಳನ್ನೂ ಅವರವರಿಗೆ ತಿಳಿಸುತ್ತ ತನ್ನ ಪರವಾಗಿ ಕಾರ್ಯ ಮಾಡಲು ನಿಯಮಿಸಲ್ಪಟ್ಟ ನಿಯೋಗಿಯಾಗಿದ್ದನು. ಅವನು ವಹಿಸಿಕೊಂಡ ಈ ಕಾರ್ಯವು ಅತ್ಯಂತ ಮಹತ್ವವಾದದ್ದು. ಇವನೂ ಕೂಡ ಒಬ್ಬ ಶ್ರೇಷ್ಠ ವಚನಕಾರನೂ ಶಿವಾನುಭವಿಯೂ ಆಗಿದ್ದಾನೆ. ಬಸವೇಶ್ವರನ ಪ್ರಭಾವದಿಂದ ಅವನ ಸಮೀಪದಲ್ಲಿದ್ದವರೆಲ್ಲರೂ, ಅವರು ಪರಿಚಾರಕರಿರಲಿ ಮಡಿವಳರಿರಲಿ, ಸೇನಾಪತಿಗಳಿರಲಿ, ಯಾರಿದ್ದರೂ ಎಲ್ಲರೂ ಧರ್ಮಿಷ್ಠರಾಗಿ ಶಿವಾನುಭವದ ಕಾರ್ಯಗಳನ್ನು ಮಾಡುತ್ತಿದ್ದುದು ಕಂಡುಬರುತ್ತಿದೆ. ಹೀಗೆ ಅವನ ಸುತ್ತಲೂ ಒಂದು ಉಚ್ಚತಮ ವಾತಾವರಣವು ಉಂಟಾಗಿತ್ತೆಂದು ಊಹಿಸಬಹುದಾಗಿದೆ.

ರಾಯಸದ ಮಂಚಣ್ಣನು ಬಸವೇಶ್ವರನ ನಿಯೋಗಿಯಾಗಿದ್ದರಿಂದ ಅವನು ನುಡಿಯಲ್ಲಿ ಚಾಣಾಕ್ಷನೂ, ಮೃದುಭಾಷೆಯುಳ್ಳವನೂ ಆಕರ್ಷಕ ಶಕ್ತಿಯುಳ್ಳವನೂ ಆಗಿದ್ದನೆಂದು ಅವನ ವಚನಗಳಿಂದ ತಿಳಿದು ಬರುತ್ತದೆ. ನಮಗೆ ಅವನ ೭ ವಚನಗಳು ಮಾತ್ರ ದೊರೆತಿದ್ದು ಅವುಗಳನ್ನೆಲ್ಲ ನಾವು ಇಲ್ಲಿ ಕೊಟ್ಟಿದ್ದೇವೆ. ಅವು ಅತ್ಯಂತ ಸ್ವಾರಸ್ಯವುಳ್ಳವೂ ಅರ್ಥಪೂರ್ಣವೂ ಇರುತ್ತವೆ. ಈ ವಚನಗಳ ಅರ್ಥಮಾಡುವಲ್ಲಿ ಅವು ಅಲ್ಲಲ್ಲಿ ಅಶುದ್ಧವಾಗಿವೆಂಬದನ್ನು ವಾಚಕರು ಲಕ್ಷಿಸಬೇಕೆಂದು ನಮ್ಮ ನಮ್ರ ಸೂಚನೆ ಇದೆ.

## ವಚನಗಳು.

ಇಷ್ಟಲಿಂಗದ ಸ್ವರೂಪ—

(೧) ಉಂಬಡೆ ಬಂದು ಬಾಯ ಮರೆದೆನೆಂದು ಮೊರೆಯಿಡುತಿಪ್ಪ ಅರಿಕೆಹೀನನ ತೆರನಂತಾಯಿತ್ತು. ಅರಿವನರಿ ಎಂದು ಕುರುಹ ಕೊಟ್ಟಲ್ಲಿ ಈ ಕುರುಹ ಮರೆದು ಅರಿದೆನೆಂಬ ಕುರುಬನ ನೋಡಾ ಜಾಂಬೇಶ್ವರಾ.

ಇಷ್ಟಲಿಂಗದ ಧ್ಯಾನ--

(೨) ಗೊಟ್ಟಿಯನೊಡ್ಡಿ ಆಡುವಲ್ಲಿ ಗೊತ್ತ ಮೀರಿದಡೆ ಮತ್ತೆ ಆಟವ ಕೊಂಡೆನೆಂಬವರಂತೆ, ದೃಷ್ಟದಲ್ಲಿ ಕೊಟ್ಟ ಲಿಂಗವ ಮನವಮುಚ್ಚಿ ಮನ ಘನದಲ್ಲಿ ಮುಚ್ಚಿ ಮನ ಆ ಘನವೇ ತಾನಾಗಿ ನೆನೆಯಲಿಲ್ಲದ ಮತ್ತೆ ತಾನು ತಾನೇ ಜಾಂಬೇಶ್ವರಾ.

ವಿಷಯ ಲೋಲುಪತೆಯನ್ನು ದೂರ ಮಾಡುವದು--

(೩) ಕೈದು ಮೊನೆ ದೋರುವದಕ್ಕೆ ಮೊದಲೆ ಕಟ್ಟಬಲ್ಲಡೆ ಕೈದು ವೇನ ಮಾಡುವದು? ಹಾವ ಬಾಯಬಿಡುವುದಕೆ ಮೊದಲೆ ಹಿಡಿದ ಮತ್ತೆ ವಿಷವೇನ ಮಾಡುವದು? ಮನವಿಕಾರಿಸುವುದಕ್ಕೆ ಮೊದಲೆ ಮಹದಲ್ಲಿ ನಿಂದ ಮತ್ತೆ ಇಂದ್ರಿಯಂಗಳೇನ ಮಾಡಲಾಪವು ಜಾಂಬೇಶ್ವರಾ?

ಇಷ್ಟ ಪ್ರಾಣಲಿಂಗಗಳ ಪರಸ್ಪರ ಸಂಬಂಧ--

(೪) ಬೆಂಕಿಗೆ ಉರಿ ಮೊದಲೋ, ಹೊಗೆ ಮೊದಲೋ ಎಂಬುದ ನರಿತಲ್ಲಿ ಇಷ್ಟಲಿಂಗಸಂಬಂಧಿ. ಈ ಉಭಯವನಳಿದಲ್ಲಿ ಪ್ರಾಣಲಿಂಗ ಸಂಬಂಧಿ. ಆ ಉಭಯ ನಷ್ಟವಾದಲ್ಲಿ ಏನೂ ಎನಲಿಲ್ಲ ಜಾಂಬೇಶ್ವರಾ.

ಜ್ಞಾನದ ಸ್ವರೂಪ--

(೫) ಮರಾಳಂಗೆ ಹಾಲು ನೀರನೆರೆದಲ್ಲಿ, ನೀರನುಗುಳಿ ಹಾಲು ಕೊಂಬ ಭೇದವ ನೋಡಾ. ಎಣ್ಣೆ ನೀರ ಕೂಡಿದಲ್ಲಿ ಎಣ್ಣೆ ತನ್ನಿಂದಲೆ ಬೆಳೆದು ತನ್ನ ತಪ್ಪಿಸಿಕೊಂಡು ಉರಿಯದ ಭೇದವ ನೋಡಾ. ಹೊನ್ನು ಮಣ್ಣಿನಲ್ಲಿ ಬೆಳೆದು ತನ್ನ ತಪ್ಪಿಸಿಕೊಂಡು ಹೊನ್ನು ಬೆಲೆಯಾದ ಪರಿಯ ನೋಡಾ. ತನ್ನೊಳಗೆ ತಾನಿರ್ದು ತನ್ನನರಿಯದೆ ತೊಳಲುವ ಬಿನ್ನಾಣವ ನೋಡಾ. ಚನ್ನಾಗಿ ನುಡಿವ ಅಣ್ಣಗಳೆಲ್ಲರೂ ಹೆಣ್ಣು ಹೊನ್ನು ಮಣ್ಣೆಂಬ ಬಲೆಗೆ ಸಿಲ್ಕಿ ಜಗವುಳ್ಳ ಅಣ್ಣಗಳ ಬಾಗಿಲಲ್ಲಿ ನಿಂದು ಬಣ್ಣಗೆಟ್ಟ ಅಣ್ಣಗಳ ಕಂಡು ಚುನ್ನವಾಡಿ ನಗುತಿರ್ದೆ ಜಾಂಬೇಶ್ವರಾ.

(೬) ಅರವಿನ ಪ್ರಸಂಗಕ್ಕೆ ಮತ್ಸರವೇಕೆ? ಮಹಾನುಭಾವಿಗೆ ಮನ್ನಣೆ ಮಾಡರೆಂಬ ಭೀಷ್ಮತೆ ಏಕೆ? ತನ್ಮಯ ತಾನಾದ ಮತ್ತೆ ತನಗನ್ಯವಿಲ್ಲ ಎಂದೆ ಜಾಂಬೇಶ್ವರಾ.

(೭) ತೊಳೆದಡೆ ಮಡಿ. ಮಾಸಿದಡೆ ಮೈಲಿಗೆ. ಅರಿದಡೆ ತಾನು, ಮರೆದಡೆ ಜಗದೊಳಗು, ಎಂಬುದನರಿ. ಹಿಡಿದು ಬಿಟ್ಟು ಕೈ ಮೀರಿದಡೆ ಮತ್ತೆ ಮರುಗಿದಡಿಲ್ಲ ಜಾಂಬೇಶ್ವರಾ.